KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಜುಲೈ ೧೭, ೨೦೦೮ (ಆಷಾಢ ೨೬, ಶಕ ವರ್ಷ ೧೯೩೦) | ಸಂಚಿಕೆ ೨೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ವಿ. ಅಶೋಕ್, ಕೆ.ಎ.ಎಸ್. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ ಮತ್ತು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ

**ಓದಲಾಗಿದೆ:** 1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರಪತ್ರ ಸಂ:ಲೋಕ್: ಐಎನ್‌ವಿ (ಜಿ):ಸಿಟಿ:ಕ್ರೈಂ 21:2008 ದಿ:8–4–2008.

**ಪ್ರಸ್ತಾವನೆ:**

ಶ್ರೀ .ವಿ. ಅಶೋಕ್, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರು ಮಂಡಳಿಯ JNNURM PROJECTS (BSUPIHSDP)ನ ವಿವರವಾದ ಯೋಜನಾ ವರದಿಯ ಕೆಲಸದ ಶುಲ್ಕದ ಬಾಬ್ತು ಒಟ್ಟು ರೂ:48.55ಲಕ್ಷಗಳ ಮೊಬಲಗನ್ನು ಬಿಡುಗಡೆ ಮಾಡಲು ಶ್ರೀ ಬಿ.ಎಸ್. ರವೀಂದ್ರ ರವಿ ಅಸೋಸಿಯೆಟ್ಸ್ ಮಂಗಳೂರು ಇವರಿಂದ ರೂ:1.00ಲಕ್ಷದ ಲಂಚದ ಹಣಕ್ಕಾಗಿ ಒತ್ತಾಯ ಮಾಡುತ್ತಿದ್ದಾರೆಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಗೆ ಶ್ರೀ ಬಿ.ಎಸ್. ರವೀಂದ್ರ ರವರು ನೀಡಿದ ದೂರಿನ ಮೇರೆಗೆ ಲೋಕಾಯುಕ್ತ ಪೊಲೀಸರು ಭ್ರಷ್ಟಾಚಾರ ವಿರೋಧ ಕಾಯ್ದೆ 1988 ಕಲಂ–7, 13(1)(ಡಿ) ಸಹವಾಚನ ಕಲಂ 13(2) ರಡಿಯ ಪ್ರಕಾರ ದಿ:05–04–2008 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂ:21/2008ರಲ್ಲಿ ಪ್ರಕರಣ ದಾಖಲಿಸಿಕೊಂಡಿರುವುದಾಗಿ ಮೇಲೆ ಓದಲಾದ ಕರ್ನಾಟಕ ಲೋಕಾಯುಕ್ತ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಪತ್ರ ದಿ:8–4–2008ರಲ್ಲಿ ವರದಿ ಮಾಡಿರುತ್ತಾರೆ. ಸದರಿ ವರದಿಯಲ್ಲಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಲಾಗಿದೆ.

ಅದರಂತೆ ದಿ:5–4–2008ರಂದು ಶ್ರೀ ವಿ. ಅಶೋಕ್ ಕೆ.ಎ.ಎಸ್. ಅಧಿಕಾರಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರು ತಾವು ಒತ್ತಾಯ ಮಾಡಿದ ಲಂಚದ ಹಣ ರೂ:50.000/– ಗಳನ್ನು ತಮ್ಮ ಕಛೇರಿಯಲ್ಲಿ ಫಿರ್ಯಾದುದಾರರ ಸಹಾಯಕರಾದ ಶ್ರೀ ಸಿದ್ದರಾಜು ರವರಿಂದ ಸ್ವೀಕರಿಸಿದಾಗ, ಬೆಂಗಳೂರು ನಗರ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿ ಬಿದ್ದಿರುತ್ತಾರೆ. ಲಂಚದ ಹಣವನ್ನು ಆರೋಪಿತರು ತಾವು ಕುಳಿತಿದ್ದ ಟೇಬಲ್‌ನ ಡ್ರಾಯರ್‌ನಲ್ಲಿಟ್ಟುಕೊಂಡಿದ್ದು, ಅದನ್ನು ಪಂಚರಸಮಕ್ಷಮ ವಶಪಡಿಸಿಕೊಂಡು ಆರೋಪಿತರು ಎರಡು ಕೈಗಳನ್ನು ಸೋಡಿಯಂ ಕಾರ್ಬೊನೆಟ್ ದ್ರಾವಣದಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳಿಸಿದಾಗ ದ್ರಾವಣಗಳು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದೆ ಎಂದು ವರದಿ ಮಾಡಿರುತ್ತಾರೆ.

ಈ ಸಂಬಂಧ ಶ್ರೀ ವಿ. ಅಶೋಕ್. ಕೆ.ಎ.ಎಸ್. ಅಧಿಕಾರಿ ರವರನ್ನು ದಿ:5.4.2008ರಂದು ದಸ್ತಗಿರಿ ಮಾಡಿ ನ್ಯಾಯಾಧೀಶರ ಮುಂದೆ ಹಾಜರುಪಡಿಸಿದ್ದು, ನ್ಯಾಯಾಧೀಶರ ಮೌಖಿಕ ಆದೇಶದಂತೆ ಆರೋಪಿತರನ್ನು ಸೂಕ್ತ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ.

ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ವಿ. ಅಶೋಕ್ ಇವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶ ಪಡಿಸುವ ಅವಕಾಶಗಳಿರುವುದರಿಂದ ಇವರನ್ನು ದಿ:5–4–2008ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡಲು ಹಾಗೂ ಇವರ ಲೀನ್ ಅನ್ನು ಬೇರೆ ಕಡೆಗೆ ವರ್ಗಾಯಿಸಲು ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು. ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕರ್ನಾಟಕ ಲೋಕಾಯುಕ್ತದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆಪಾದಿತ ಅಧಿಕಾರಿಯು ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿ ಬಿದ್ದಿದ್ದರಿಂದಲು ಫಿನಾಪ್ತಲಿನ್ ಪರೀಕ್ಷೆಯಲ್ಲಿ ಸಕರಾತ್ಮಕ ಫಲಿತಾಂಶ ಬಂದಿರುವುದರಿಂದಲೂ, ಆಪಾದಿತರ ಭ್ರಷ್ಟಾಚಾರವು ಮೇಲ್ನೋಟಕ್ಕೆ ಸಾಬೀತು ಪಡುವುದರಿಂದಲೂ ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ಶ್ರೀ ವಿ. ಅಶೋಕ್ ಕೆ.ಎ.ಎಸ್. ಅಧಿಕಾರಿ ಅವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 29 ಕೆಇವಿ 2008 ಬೆಂಗಳೂರು, ದಿನಾಂಕ:15ನೇ ಏಪ್ರಿಲ್ 2008**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ. ಅಶೋಕ್ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿ. ಅಶೋಕ್,. ಕೆ.ಎ.ಎಸ್. ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿ. ಅಶೋಕ್. ಕೆ.ಎ.ಎಸ್ ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್. 650

## COMMERCE & INDUSTRIES SECRETARIAT

**Sub :** Participation in the CHINA-INDIA Iron ore Summit, Westin Hotel, Beijing (China) on 28th - 29th April 2008

**Read :** Letter No. MML/MKT/FT/CIIOS/38/2008-09/116 dated 4-4-2008.

**Preamble:**

The Chairman and Managing Director, M/s Mysore Minerals Limited in his letter dated 4-4-2008 read at above as reported that the Federation of Indian Mineral Industries (FIMI) New Delhi & China Iron & Steel Association, Beijing have organized ''CHINA-INDIA IRON ORE SUMMIT' at Beijing China on 28th and 29th April 2008. An exclusive summit for Iron ore will give an opportunity to interact with the end users and other buyers representing steel industries. The summit will help in knowing the future demand for iron ore in China in particular and in the International market in general. It also gives and opportunity to have a one-to-one discussion with the buyers. The summit will provide firsthand information about the recent trends and technology developed in mining of iron ore and requested to depute Sri G.V. Kongawad, IAS, Chairman and Managing Director, M/s/.Mysore Minerals Limited to visit the said summit. Further he also

reported the Board has approved to depute the Chairman and Managing Director to the summit and the estimated expenditure of Rs. 1,82,000,-00 for the proposed visit will be met out by the MMLs own funds.

The proposal has been examined in detail.

**Government Order No. CI. 148:MMM. 2008, Bangalore, Dated:22nd April 2008**

In the circumstances explained in the preamble, the Government are pleased to accord permission to Sri G.V. Kongawad, IAS, Chairman and Managing Director, M/s Mysore Minerals Limited to participate in ''CHINA-INDIA IRON ORE SUMMIT' to be held at Beijing China on 28th and 29th April 2008 with the following conditions:

1. The expenditure to visit the summit to be borne by the M/s Mysore Minerals Limited,
2. The Per diems should be restricted as per the instructions given in the Government Order No. F.D. 9. SRA 2000 dated 20-11-2003
3. The Officer should submit tour dairy to the Government within 15 days after return from the foreign journey. The tour dairy should be in A4 size sheet and should not exceed 750 words.

This order issues with the concurrence of DPAR vide its note No. DPAR 63 SME 2008 dated 17-4-2008.

By Order and in the name of the President of India,

**M. VASUDEVAMURTHY**

P.R. 661

Under Secretary to Government(Mines)

Commerce & Industries Department.

**FINANCE SECRETARIAT**

**Sub :** Procurement of Works-mandating the Standard Tender Documents-Deferring the mandating-Extension of

**Read :** G.O. No. FD 04 PCL 2006 Dated 12.7.2007

**Preamble:**

In the G.O.No. FD 04 PCL 2006 dtd.12.7.2007 read above the implementation of G.O.No. FD 06 PCL 2006, dtd.21.3.2007 mandating the Standard Tender Document for Procurement of Works was deferred till 31.12.2007 by which time the Standing Committee set up was suppose to submit its recommendation for modification of the Standard Tender Document for Procurement of Works. As decision is yet to be taken on the recommendations of the Standing Committee, the PWD has requested to extend the validity of the G.O. dtd 12.7.2007 till a final decision is taken on the proposed modification.

**Government Order No. FD 04 PCL 2007, Bangalore, Dated:2nd April 2008**

In the above circumstances, the implementation of G.O.No. FD 06 PCL 2006, dated 21.3.2007 mandating the Standard Tender Documents deferred till 31.12.2007 is extended till 30.6.2008 or till a final decision is taken on the proposed modification whichever is earlier.

By Order and in the name of the President of India,

**H.S. VENKATESHAIAH**

P.R. 656

Deputy Secretary to Government,

Finance Department. (Procurement. Cell)

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ : ಅಸಂಇ 23 ಅಸಂಯೋ 2008, ಬೆಂಗಳೂರು, ದಿನಾಂಕ :17ನೇ ಏಪ್ರಿಲ್ 2008**

ಸರ್ಕಾರಿ ಆದೇಶ ಸಂಖ್ಯೆ : ಸಕಇ 164 ಅಸಂಯೋ 2001 ದಿನಾಂಕ :31–1–2002 ರಲ್ಲಿ ರಚಿಸಲ್ಪಟ್ಟ ಅಲ್ಪಸಂಖ್ಯಾತರ ಇಲಾಖೆಯ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ವಸತಿ ನಿಲಯಗಳ ಪ್ರವೇಶ ನಿಯಮಗಳ ನಿಯಮ 11ರ ಅಂತ್ಯದಲ್ಲಿ ಈ ಕೆಳಕಾಣಿಸಿದಂತೆ ಸೇರ್ಪಡೆ ಮಾಡಲಾಗಿದೆ.

"ಒಟ್ಟಾರೆ ಅಭ್ಯರ್ಥಿಗಳ :ಪ್ರವೇಶದಲ್ಲಿ ಶೇ :25ರಷ್ಟು ಕೆಲಸದಿಂದ ಬಿಡುಗಡೆಗೊಂಡ ಬಾಲ ಕಾರ್ಮಿಕತೆಯ ಮಕ್ಕಳಿಂದ ಭರ್ತಿಮಾಡುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು".

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ನಿಸಾರ್ ಅಹಮದ್**

ಪಿ.ಆರ್. 660

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ–ಸಂಸ್ಥೆಯ ಗೌರ್ನಿಂಗ್ ಕೌನ್ಸಿಲ್ ಅವಧಿಯನ್ನು ದಿನಾಂಕ:8–4–2008 ರಿಂದ 28–4–2008ರವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಐ 193 ಎಸ್‌ಜಿಎಫ್ 94 (ಭಾ) ದಿನಾಂಕ:8.10.2003

2 ಸರ್ಕಾರದ ಆದೇಶ ಸಂಖ್ಯೆ:ಸಿಐ 121 ಎಸ್‌ಜಿಎಫ್ 07 ದಿನಾಂಕ:31.5.2007

3 ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರು, ರವರ ಪತ್ರ ಸಂಖ್ಯೆ:ಕೆಎಸ್‌ಐ/ಇಎಕ್ಸ್‌ಟಿ/ಜಿಸಿ/2007–08/889 ದಿನಾಂಕ:26.3.2008

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 8–10–03ರ ಸರ್ಕಾರದ ಆದೇಶದ ಮೊದಲನೇ ಅಂಶದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಯ ಆಡಳಿತ ನಿರ್ವಹಣೆಗೆ ಗೌರ್ನಿಂಗ್ ಕೌನ್ಸಿಲ್ ಜಾಗದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಹ ಸದಸ್ಯರನ್ನಾಗಿ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಮತ್ತು ಕೇಂದ್ರ ಸರ್ಕಾರದ ಇಲಾಖೆ ಮತ್ತು ಉದ್ಯಮ ಮತ್ತು ಪ್ರಯೋಗಾಲಯಗಳ ಪ್ರತಿನಿಧಿಗಳು ಮತ್ತು ಸಕ್ಕರೆ ಉದ್ಯಮದ ಪ್ರತಿನಿಧಿಗಳಾದ ಕರ್ನಾಟಕ ರಾಜ್ಯ ಸಹಕಾರಿ ಸಕ್ಕರೆ ಕಾರ್ಖಾನೆಗಳ ಮಹಾ ಮಂಡಳಿ ಮತ್ತು ದಕ್ಷಿಣ ಭಾರತ ಸಕ್ಕರೆ ಕಾರ್ಖಾನೆಗಳ ಒಕ್ಕೂಟ ಬೆಂಗಳೂರು, ಕೃಷಿ ವಿಶ್ವವಿದ್ಯಾನಿಲಯಗಳ ಮತ್ತು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಇತ್ಯಾದಿಗಳ ಪ್ರತಿನಿಧಿಗಳನ್ನು ಒಳಗೊಂಡಂತೆ ಮುಂದಿನ ಮೂರು ವರ್ಷಗಳ ಅವಧಿಗೆ ಸಮಿತಿ ರಚಿಸುವುದು. ಅನಂತರ, ಸಂಸ್ಥೆಯ ಮೆಮೋರಾಂಡಮ್ ಆಫ್ ಅಸೋಸಿಯೇಷನ್ ನಂತೆ ಚುನಾಯಿತ ಮಂಡಳಿಯು ಅಧಿಕಾರ ವಹಿಸಿಕೊಳ್ಳುವುದು ಎಂದು ಆದೇಶವಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಆದೇಶದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇದರ ಹಾಲಿ ಕಾರ್ಯನಿರ್ವಹಿಸುತ್ತಿರುವ ಗೌರ್ನಿಂಗ್ ಕೌನ್ಸಿಲ್‌ನ್ನು ದಿನಾಂಕ :8–4–07 ರಿಂದ 1 ವರ್ಷದ ಅವಧಿಯವರೆಗೆ ಮಾತ್ರ ಮುಂದುವರೆಸಲು ಆದೇಶಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ರವರ ಪತ್ರದಲ್ಲಿ ಸಂಸ್ಥೆಯ ಗೌರ್ನಿಂಗ್ ಕೌನ್ಸಿಲ್‌ಗೆ ದಿನಾಂಕ :28.4.2008 ರಂದು ಚುನಾವಣೆ ದಿನಾಂಕ ನಿಗದಿಗೊಳಿಸಲಾಗಿರುವುದರಿಂದ ಹಾಲಿ ಇರುವ ಗೌರ್ನಿಂಗ್ ಕೌನ್ಸಿಲ್ ಅವಧಿಯು ದಿನಾಂಕ :7–4–08ಕ್ಕೆ ಮುಕ್ತಾಯಗೊಳ್ಳುತ್ತಿರುವುದರಿಂದ ಚುನಾವಣೆ ದಿನಾಂಕವಾದ ದಿನಾಂಕ :28–4–2008 ರವರೆಗೆ ಹಾಲಿ ಇರುವ ಗೌರ್ನಿಂಗ್ ಕೌನ್ಸಿಲ್‌ನ್ನು ದಿನಾಂಕ :8–4–08 ರಿಂದ 28–4–08 ರವರೆಗೆ ಮುಂದುವರೆಸುವ ಬಗ್ಗೆ ಕೋರಿರುತ್ತಾರೆ.

ಮೇಲಿನ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರ ಆದೇಶ ಸಂಖ್ಯೆ :ಸಿಐ 121 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ :21ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ, ಇದರ ಹಾಲಿ ಕಾರ್ಯನಿರ್ವಹಿಸುತ್ತಿರುವ ಗೌರ್ನಿಂಗ್ ಕೌನ್ಸಿಲ್‌ನ್ನು ದಿನಾಂಕ :8–4–08 ರಿಂದ ದಿನಾಂಕ :28–4–08 ಅವಧಿಯವರೆವಿಗೆ ಮಾತ್ರ ಮತ್ತೇ ಮುಂದುವರಿಸಲು ಆದೇಶಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.662

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಸ್. ಹಿರೇಮಠ್, ನಿವೃತ್ತ ಸರ್ಕಾರಿ ಅಭಿಯೋಜಕರು, 1ನೇ ಶೀಘ್ರವಿಲೇವಾರಿ ನ್ಯಾಯಾಲಯ, ಜಮಖಂಡಿ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

1. ಸರ್ಕಾರದ ಅಧಿಸೂಚನೆ ನಂ. ಲಾ 15 ಪಿಪಿಇ 83, ದಿನಾಂಕ 27.1.1984.
2 ಸರ್ಕಾರದ ಆದೇಶ ನಂ. ಲಾ 109 ಪಿಪಿಇ 84, ದಿನಾಂಕ: 27.6.84
3 ಸದರಿ ಅಧಿಕಾರಿಯವರ ಮನವಿ ದಿನಾಂಕ:1.9.2007
4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಲೆಕ್ಕ1/207/2007–08, ದಿನಾಂಕ:19.9.2007

**ಪ್ರಸ್ತಾವನೆ:**

ಶ್ರೀ ಹೆಚ್.ಎಸ್. ಹಿರೇಮಠ್, ನಿವೃತ್ತ ಸರ್ಕಾರಿ ಅಭಿಯೋಜಕರು, 1ನೇ ಶೀಘ್ರವಿಲೇವಾರಿ ನ್ಯಾಯಾಲಯ, ಜಮಖಂಡಿ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ:27.1.1984ರ ಕ್ರ.ಸಂ. 26ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ:15.2.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ:24.1.1949 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ದೃಢೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 24.1.1949 ಆಗಿದ್ದು, ಅವರು ದಿನಾಂಕ:15.2.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 35 ವರ್ಷ 21 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247 (ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಹೆಚ್.ಎಸ್. ಹಿರೇಮಠ್, ನಿವೃತ್ತ ಸರ್ಕಾರಿ ಅಭಿಯೋಜಕರು, ಜಮಖಂಡಿ, ಇವರು ದಿನಾಂಕ:15.2.1984 ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ:24.1.1949 ಆಗಿದ್ದು, ಇವರು 35 ವರ್ಷ, 21 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ನಿಯಮದ ಪ್ರಕಾರ ಗರಿಷ್ಠ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 485 ಪಿಪಿಇ 2007, ಬೆಂಗಳೂರು, ದಿನಾಂಕ:16ನೇ ಏಪ್ರಿಲ್ 2008**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಹೆಚ್.ಎಸ್. ಹಿರೇಮಠ್, ನಿವೃತ್ತ ಸರ್ಕಾರಿ ಅಭಿಯೋಜಕರು, 1ನೇ ಶೀಘ್ರವಿಲೇವಾರಿ ನ್ಯಾಯಾಲಯ ಜಮಖಂಡಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಆಇ 210 ವೆಚ್ಚ–7/08, ದಿನಾಂಕ:20.3.2008ರ ಸಹಮತಿಯನ್ವಯ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 663

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾ. ಮತ್ತು ಸು, ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಐ.ಜಿ. ಲಾಲಖಾನವರ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ II ನಂ. ಲಾ 229 ಪಿಪಿಇ 81, ದಿನಾಂಕ 24.2.1982.
2 ಸರ್ಕಾರದ ಆದೇಶ ನಂ. ಲಾ 79 ಪಿಪಿಇ 83, ದಿನಾಂಕ: 28.6.83
3 ಸದರಿ ಅಧಿಕಾರಿಯವರ ಮನವಿ ದಿನಾಂಕ:4.5.2007
4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಲೆಕ್ಕ–1/2709/2007–08, ದಿನಾಂಕ:18.5.2007

**ಪ್ರಸ್ತಾವನೆ:**

ಐ.ಜಿ. ಲಾಲಖಾನವರ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ:24.2.1982ರ ಕ್ರ.ಸಂ. 32ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ: 5.3.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ:1.4.1949 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ದೃಢೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 1.4.1949 ಆಗಿದ್ದು, ಅವರು ದಿನಾಂಕ: 5.3.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 32 ವರ್ಷ 11 ತಿಂಗಳು, 04 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247 (ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಐ.ಜಿ. ಲಾಲಖಾನವರ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ಇವರು ದಿನಾಂಕ 5.3.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ:1.4.1949 ಆಗಿದ್ದು, ಇವರು 32 ವರ್ಷ, 11 ತಿಂಗಳು, 04 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ನಿಯಮದ ಪ್ರಕಾರ ಎರಡು ವರ್ಷಗಳ ಸೇವೆಯನ್ನು ನಿವೃತ್ತಿ ವೇತನದ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 259 ಪಿಪಿಇ 2007, ಬೆಂಗಳೂರು, ದಿನಾಂಕ:16ನೇ ಏಪ್ರಿಲ್ 2008**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಐ.ಜಿ. ಲಾಲಖಾನವರ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಎರಡು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಆಇ 184 ವೆಚ್ಚ–7/08, ದಿನಾಂಕ:24.3.2008ರ ಸಹಮತಿಯನ್ವಯ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 664

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾ. ಮತ್ತು ಸು, ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಸಹಕಾರಿ ಸಕ್ಕರೆ ಕಾರ್ಖಾನೆಗಳು ಹಾಗೂ ಸಹಕಾರಿ ನೂಲಿನ ಗಿರಣಿಗಳ ವಿಷಯವನ್ನು ಸಿಬ್ಬಂದಿಗಳೊಡನೆ ಸಹಕಾರ ಇಲಾಖೆಯಿಂದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಐ 59 ಎಸ್‌ಜಿಎಫ್ 08 ದಿನಾಂಕ:11–4–2008.
2 ಸಹಕಾರ ಇಲಾಖೆಯ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ ಸಿಓ 01 ಎಸ್ ಎಸ್ ಕೆ 2008, ದಿನಾಂಕ:5–5–2008.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರಿ ಸಚಿವಾಲಯದ ಸಹಕಾರ ಇಲಾಖೆಯಲ್ಲಿ ಪ್ರಸ್ತುತ ಸಹಕಾರಿ ಸಕ್ಕರೆ ಕಾರ್ಖಾನೆಗಳು ಹಾಗೂ ಸಹಕಾರಿ ನೂಲಿನ ಗಿರಣಿಗಳ ವಿಷಯಗಳನ್ನು ನಿರ್ವಹಿಸುತ್ತಿದ್ದು, ಈ ಬಗ್ಗೆ ಕ್ಷೇತ್ರ ಇಲಾಖೆಯಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗು ಜವಳಿ ಆಯುಕ್ತರು ಇಲಾಖಾ ಮುಖ್ಯಸ್ಥರಾಗಿದ್ದು, ಈ ವಿಷಯಗಳನ್ನು ನಿರ್ವಹಿಸುತ್ತಿದ್ದಾರೆ. ಸಚಿವಾಲಯದಲ್ಲಿ ಈ ಇಬ್ಬರು ಇಲಾಖಾ ಮುಖ್ಯಸ್ಥರಿಗೆ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಆಡಳಿತಾತ್ಮಕ ಇಲಾಖೆಯಾಗಿರುವುದರಿಂದ ಹಾಗೂ ಇದರ ಬಗೆಗಿನ ಬಹುತೇಕ ವಿಷಯಗಳು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿ ನಿರ್ವಹಿಸುತ್ತಿರುವುದರಿಂದ ಈ ಎರಡು ವಿಷಯಗಳನ್ನು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ನಿರ್ವಹಿಸುವುದು ಸೂಕ್ತವೆಂದೂ, ಈ ಎರಡು ವಿಷಯಗಳನ್ನು ಸಂಬಂಧಪಟ್ಟ ಸಿಬ್ಬಂದಿಯೊಡನೆ ಸಹಕಾರ ಇಲಾಖೆಯಿಂದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ವರ್ಗಾಯಿಸಬೇಕೆಂದು ಮೇಲೆ (1) ಮತ್ತು (2)ರಲ್ಲಿ ಓದಲಾದ ಟಿಪ್ಪಣಿಗಳಲ್ಲಿ ಎರಡು ಇಲಾಖೆಗಳು ಅಭಿಪ್ರಾಯಪಟ್ಟು ಅದರಂತೆ ಆದೇಶವನ್ನು ಹೊರಡಿಸಲು ಕೋರಿವೆ. ಅದರಂತೆ ವರ್ಗಾವಣೆ ಮಾಡಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 394 ಸಅಸೇ 2008, ಬೆಂಗಳೂರು, ದಿನಾಂಕ:24ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಹಕಾರ ಇಲಾಖೆಯಲ್ಲಿ ನಿರ್ವಹಿಸಲ್ಪಡುತ್ತಿರುವ ಸಹಕಾರಿ ಸಕ್ಕರೆ ಕಾರ್ಖಾನೆಗಳು ಹಾಗೂ ಸಹಕಾರಿ ನೂಲಿನ ಗಿರಣಿಗಳಿಗೆ ಸಂಬಂಧಪಟ್ಟ ವಿಷಯವನ್ನು ಅಧೀನ ಕಾರ್ಯದರ್ಶಿ, ಶಾಖಾಧಿಕಾರಿ ಹಾಗೂ ಇನ್ನಿತರೆ ಸಿಬ್ಬಂದಿಗಳೊಡನೆ ತಕ್ಷಣದಿಂದ ಜಾರಿಗೆ ಬರುವಂತೆ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ವರ್ಗಾಯಿಸಿದೆ.

2) ವರ್ಗಾವಣೆ ನಂತರವೂ ಸಹ ಈ ಎರಡು ವಿಷಯಗಳಿಗೆ ಸಂಬಂಧಪಟ್ಟ ಸಹಕಾರ ಕಾಯಿದೆಯನ್ನು ಸಹಕಾರ ಇಲಾಖೆಯೇ ನಿರ್ವಹಿಸುವುದು.

3) ಈ ಬಗ್ಗೆ ಕರ್ನಾಟಕ ಸರ್ಕಾರಿ (ವ್ಯವಹಾರ ಹಂಚಿಕೆ) ನಿಯಮಗಳು 1977ಕ್ಕೆ ಸೂಕ್ತವಾದ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 854

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## HEALTH & FAMILY WELFARE SECRETARIAT

**Sub :** Special administrative sanction to DPMOs for drawing amount on AC Bills-reg

**Ref :** Govt Order No. HFW/KHSDRP/OD/Study 55/2007-08, Bangalore, dated 10-3-2008

**Preamble:**

In the Government Order mentioned above it was decided to conduct taluk level orientation workshop on preparation of Service Improvement Plans under SICF component, in 4 taluks of every districts. The Taluk Health Officers, Medical Officers of 4 Primary Medical Health Centres, 2 male and 2 frmale Supervisors and 2 male and 2 female Junior Health Assistants will undergo training. Arrangements for the workshop include preparation of reading materials, TA/DA hiring of premises etc., An estimated amount of Rs. 12,26, 700/-has been released vide the said government order. The amount was released to 27 districts. Some of the DPMOs have been unable to conduct the said workshops and utilize the said budget. It is hence required to authorise the District Project Management Officers to draw the allocated amount on AC Bill and utilize it during the year 2008-09.

Hence the following order.

**Govt Order No. HFW/KHSDRP/OD/Study 55/2007-08, Bangalore, dated :22nd May 2008**

Under the circumstances explained in the preamble, Government are pleased to accord special administrative sanction to District Project Management Officers (DPMOs) of KHSDRP to draw the allocated budget as mentioned below on abstract contingency bill.

| Sl. No | District | Name of the Taluks | No. of Taluk Level Orientation Workshop | Budget for Taluk Level Workshop |
|---|---|---|---|---|
| 1 | Chitradurga | 6 | 4 | 42800 |
| 2 | Bijapur | 5 | 3 | 32100 |
| 3 | Gulbarga | 10 | 7 | 74900 |
| 4 | D. Kannada(DK) | 5 | 3 | 32100 |
| 5 | Kodagu | 3 | 2 | 21400 |
| 6 | Mysore | 7 | 5 | 53500 |
| | Total | 175 | 116 | 1241200 |
| (Total Rupees Twelve lakhs fortyone thousand two hundred only) | | | | |

The DPMOs shall render vouchers and receipts at the time of setting of accounts the participants are eligible for TA/DA as per KCSRs.

The expenditure shall be debited under the Head of Account "2210-06-800-0-85(P) for the financial year 2008-09.

By Order and in the name of the President of India,

P.R. 855

**SUSHAMA GODBOLE**

Deputy Secretary to Government

Department. of Health & Family Welfare

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು– ದುಡಿಯುವ ಬಂಡವಾಳ ಬಿಡುಗಡೆ ಬಗ್ಗೆ ಆಡಳಿತಾತ್ಮಕ ಆದೇಶ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಐ 202 ಎಸ್‌ಜಿಎಫ್ 04 ದಿನಾಂಕ: 6.5.05
2 ಸರ್ಕಾರದ ಆದೇಶ ಸಂಖ್ಯೆ:ಸಿಐ 153 ಎಸ್‌ಜಿಎಫ್ 05 ದಿನಾಂಕ: 24.8.05
3 ಸರ್ಕಾರದ ಆದೇಶ ಸಂಖ್ಯೆ:ಸಿಐ 202 ಎಸ್‌ಜಿಎಫ್ 04 (ಭಾ–3) ದಿನಾಂಕ: 16–9–05
4 ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್‌ಜಿಎಫ್ 05 ದಿನಾಂಕ: 6.10.05
5 ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್‌ಜಿಎಫ್ 05 ದಿನಾಂಕ: 25.11.05
6 ಸರ್ಕಾರದ ಆದೇಶ ಸಂಖ್ಯೆ:ಸಿಐ 110 ಎಸ್‌ಜಿಎಫ್ 05 ದಿನಾಂಕ: 28.2.06
7 ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್‌ಜಿಎಫ್ 05 ದಿನಾಂಕ: 3.8.06
8 ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್‌ಜಿಎಫ್ 05 ದಿನಾಂಕ: 10.10.06
9 ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್‌ಜಿಎಫ್ 05 ದಿನಾಂಕ: 11.6.07
10 ಸರ್ಕಾರದ ಆದೇಶ ಸಂಖ್ಯೆ:ಸಿಐ 119 ಎಸ್‌ಜಿಎಫ್ 07 ದಿನಾಂಕ: 25.7.07
11 ಸರ್ಕಾರದ ಆದೇಶ ಸಂಖ್ಯೆ:ಸಿಐ 119 ಎಸ್‌ಜಿಎಫ್ 07 ದಿನಾಂಕ: 4.2.08
12 ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ ಎಂಎಸ್ ಕೋ/08/ಎಂಡಿ273 ದಿ:3.3.08.

**ಪ್ರಸ್ತಾವನೆ:**

ಮೇಲೆ ಓದಲಾದ 1ರಿಂದ 11 ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಗೆ 2005–06ನೇ ಸಾಲಿನಿಂದ 2007–08ನೇ ಸಾಲಿನವರೆಗೆ ಕಾರ್ಖಾನೆಯ ಕಬ್ಬು ಅರೆಯುವ ಚಟುವಟಿಕೆಗೆ ದುಡಿಯುವ ಬಂಡವಾಳ ಸಹ ವಿದ್ಯುತ್ ಘಟಕದ ಪ್ರಾರಂಭಕ್ಕಾಗಿ ಕಾರ್ಮಿಕರ ಸ್ವಯಂ ನಿವೃತ್ತಿ ಸೌಲಭ್ಯಕ್ಕಾಗಿ ಹಾಗೂ ಡಿಬೆಂಚರ್ ಹೋಲ್ಡರ್ಸ್ ಗಳಿಗೆ ಬಡ್ಡಿ ಹಣ ಪಾವತಿಸುವ ಸಲುವಾಗಿ ಒಟ್ಟು 8110.27 ಲಕ್ಷ ರೂ.ಗಳನ್ನು ಸಾಲವಾಗಿ ಸರ್ಕಾರವು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (12) ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ 2007–08ನೇ ಸಾಲಿಗೆ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬಿನ ಬೆಲೆಯನ್ನು ಪಾವತಿಸಲು ಹಾಗೂ ಕಬ್ಬು

ಅರೆಯುವಿಕೆಯ ಕಾರ್ಯ ಬಂಡವಾಳ/ಡಿಸ್ಟಲರಿ ಆಧುನೀಕರಣ ಸಹವಿದ್ಯುತ್ ಘಟಕದ ಸರಬರಾಜುದಾರರಿಗೆ ಮತ್ತು ಬಂಡವಾಳ ಹೂಡಿಕೆಗಾಗಿ 96.45 ಕೋಟಿ ರೂ.ಗಳ ಅಗತ್ಯವಿದೆ ಎಂದು ತಿಳಿಸಿ ಈ ಹಣವನ್ನು ಕೂಡಲೇ ಬಿಡುಗಡೆ ಮಾಡಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಕೂಲಕುಂಷವಾಗಿ ಪರಿಶೀಲಿಸಿ 2007–08ನೇ ಸಾಲಿನಲ್ಲಿ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣ ಪಾವತಿಸಲು ದುಡಿಯುವ ಬಂಡವಾಳವಾಗಿ 4.00 ಕೋಟಿ ರೂ.ಗಳನ್ನು ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆಡಳಿತಾತ್ಮಕ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ :ಸಿಐ 39 ಎಸ್‌ಜಿಎಫ್ 2008, ಬೆಂಗಳೂರು, ದಿನಾಂಕ :15ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2007–08ನೇ ಸಾಲಿನಲ್ಲಿ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣ ಪಾವತಿಸಲು ದುಡಿಯವ ಬಂಡವಾಳವಾಗಿ 4.00 ಕೋಟಿ ರೂ.ಗಳನ್ನು (ರೂ. ನಾಲ್ಕು ಕೋಟಿ ರೂ.ಗಳು ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2008–09ನೇ ಸಾಲಿನ ಅನುದಾನದಲ್ಲಿ ಇದಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಆದುದರಿಂದ ಮೊದಲಿಗೆ ಈ ಹಣವನ್ನು ಸಾದಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ "8000–00–673–0–00 ಕೈಗಾರಿಕೆಗಳು" ಇದರಡಿಯಲ್ಲಿನ ಲೆಕ್ಕ ಶೀರ್ಷಿಕೆ 6860–04–190–2–395(ಪಿ) ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು ಅಡಿಯಲ್ಲಿನ ಪೂರಕ ಅನುದಾನದ ಮೂಲಕ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಸಾದಿಲ್ವಾರು ನಿಧಿಯಿಂದ ಈ ಹಣವನ್ನು ಬಿಡುಗಡೆಗೊಳಿಸಲು ಆರ್ಥಿಕ ಇಲಾಖೆಯು ಪ್ರತ್ಯೇಕ ಆದೇಶವನ್ನು ಹೊರಡಿಸಲಿದೆ. ಆ ನಂತರವೇ ಹಣ ಬಿಡುಗಡೆಗೆ ಕ್ರಮವಹಿಸಬೇಕು ಹಣ ಸೆಳೆಯುವ ಅಧಿಕಾರಿಯವರು ಸಾದಿಲ್ವಾರು ನಿಧಿಯಿಂದ ಹಣ ಸೆಳೆಯಲು ಬಿಲ್ಲನ್ನು ಆರ್ಥಿಕ ಇಲಾಖೆಯಿಂದ ಹೊರಡಿಸುವ ಪ್ರತ್ಯೇಕ ಆದೇಶವನ್ನು ಈ ಆದೇಶದೊಂದಿಗೆ ಲಗತ್ತಿಸಿ, ಖಜಾನೆಗೆ ಸಲ್ಲಿಸಿದ ನಂತರ ಹಣ ಬಿಡುಗಡೆಗೆ ಖಜಾನೆ ಕ್ರಮವಹಿಸುವುದು.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 589 ವೆಚ್ಚ–1/08 ದಿನಾಂಕ:14.5.08ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 856

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:**
1. ದಿನಾಂಕ:12–4–2007ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13.6.07
3 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12.9.07
4 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2) (2)) ದಿನಾಂಕ: 19.10.07
5 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2)(3)) ದಿನಾಂಕ: 2.11.07
6 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2(4)) ದಿನಾಂಕ: 1.1.08
7 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2) (6) ದಿನಾಂಕ: 22.2.08
8 ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ: 12.3.2008
9 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2) (7) ದಿನಾಂಕ: 20.3.08
10 ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2) (8) ದಿನಾಂಕ: 25.3.08

11 ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ಎಸ್‌ಟಿಟಿ/13/2007–08 ದಿನಾಂಕ: 22.1.2008

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2) ರಿಂದ (6) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ. 3,62,18.916/– ರೈತರಿಗೆ ಪರಿಹಾರ ಧನ ರೂ. 25,00.00.000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92.000/– ರೂಗಳು ಸೇರಿ ಒಟ್ಟು 49,76,10.916 /–ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7)(8)(10) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ 7.00 ಕೋಟಿ ರೂ.ಗಳು 6.64 ಕೋಟಿ ರೂ.ಗಳು ಮತ್ತು 1,25,11.000/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ಆದೇಶದಲ್ಲಿ ವಿಸ್ತರಿಸಿದ ಅವಧಿಯ ನಂತರ ಅಂದರೆ ದಿನಾಂಕ:1–6–07 ರಿಂದ 31.7.07 ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ 8.75 ಕೋಟಿ ರೂ.ಗಳ ಸಹಾಯಧನ ಬಿಡುಗಡೆಗೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಮೇಲೆ ಓದಲಾದ (10)ರಲ್ಲಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಟನ್ ಕಬ್ಬಿಗೆ ರೂ. 100/ನಂತೆ 8,74,92,000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ಮೇಲೆ ಓದಲಾದ (1)ರಲ್ಲಿರುವ ಆದೇಶದಂತೆ ದಿನಾಂಕ:16.4.07 ರಿಂದ 31.5.07 ರವರೆಗೆ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು, ನುರಿಸಲಾದ ಪ್ರತಿ ಟನ್ ಕಬ್ಬಿಗೆ 100 ರೂ.ಗಳ ಸಹಾಯಧನದ ಬಾಕಿ ಹಣ 1902.44 ಲಕ್ಷ ರೂ.ಗಳನ್ನು 21 ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಕಾರ್ಖಾನೆಗಳ ವಿವರದೊಂದಿಗೆ ನೀಡಿ ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ :ಸಿಐ 58ಎಸ್‌ಜಿಎಫ್ 2007 (ಭಾ–2) (9) ಬೆಂಗಳೂರು, ದಿನಾಂಕ :21ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಕ್ಕರೆ ಕಾರ್ಖಾನೆಗಳು 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ ದಿನಾಂಕ:16.4.07 ರಿಂದ 31.5.07 ರವರೆಗಿನ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ 100 ರೂಗಳ ಸಹಾಯಧನವನ್ನು ಈ ಆದೇಶದ ಅನುಬಂಧದಲ್ಲಿ ಕಾಣಿಸಿರುವ 21 ಸಕ್ಕರೆ ಕಾರ್ಖಾನೆಗಳಿಗೆ ನೀಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ 10.00/– ಕೋಟಿ ರೂಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ) 106 ಸಹಾಯಧನ" ಅಡಿಯಲ್ಲಿ 25.00 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ 10 ಕೋಟಿ ರೂ.ಗಳನ್ನು 21 ಸಕ್ಕರೆ ಕಾರ್ಖಾನೆಗಳಿಗೆ ಸಹಾಯಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ:13.6.07ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಹಣ ಉಳಿಸಿಕೊಂಡಿದ್ದಲ್ಲಿ ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 555 ವೆಚ್ಚ–1/08 ದಿನಾಂಕ:12.5.08ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 07 (ಭಾ–2)(9) ದಿನಾಂಕ:21–5–08ಕ್ಕೆ ಸಂಬಂಧಿಸಿದ ಅನುಬಂಧ ದಿನಾಂಕ:16.4.07 ರಿಂದ 31.5.07ರ ವಿಸ್ತರಿಸಿದ ಅವಧಿಯಲ್ಲಿ ಕಾರ್ಖಾನೆಗಳು ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂಗಳ ಸಹಾಯಧನ**

(ಲಕ್ಷ ರೂ.ಗಳಲ್ಲಿ)

| ಕ್ರ.ಸಂ | ಸಕ್ಕರೆ ಕಾರ್ಖಾನೆಯ ಹೆಸರು | ಕಾರ್ಖಾನೆಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ | ಬಿಡುಗಡೆ ಮಾಡಲಾದ ಹಣ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|
| 1 | ಕೃಷ್ಣ ಸ.ಸ.ಕಾ | 74.91 | 35.00 | ಬೆಳಗಾಂ |
| 2 | ಹೀರಣ್ಯಕೇಶಿ ಸ.ಸ.ಕಾ | 172.49 | 86.00 | ಬೆಳಗಾಂ |
| 3 | ವಿಶ್ವನಾಥ ಶುಗರ್ಸ್ | 81.21 | 40.00 | ಬೆಳಗಾಂ |
| 4 | ಉಗಾರ್ ಶುಗರ್ಸ್ | 23.94 | 12.00 | ಬೆಳಗಾಂ |
| 5 | ಅಥಣಿ ಫಾರ್ಮರ್ಸ್ ಶುಗರ್ಸ್ | 88.63 | 45.00 | ಬೆಳಗಾಂ |
| 6 | ರೇಣುಕಾ ಶುಗರ್ಸ್, ಮನೋಳಿ | 223.19 | 110.00 | ಬೆಳಗಾಂ |
| 7 | ರೇಣುಕಾ ಶುಗರ್ಸ್, ಕೊಕಟನೂರು | 109.56 | 55.00 | ಬೆಳಗಾಂ |
| 8 | ಗೋದಾವರಿ ಶುಗರ್ಸ್ | 355.79 | 190.00 | ಬಾಗಲಕೋಟೆ |
| 9 | ಜಮಖಂಡಿ ಶುಗರ್ಸ್ | 106.18 | 55.00 | ಬಾಗಲಕೋಟೆ |
| 10 | ನಿರಾಣಿ ಶುಗರ್ಸ್ | 17.91 | 10.00 | ಬಾಗಲಕೋಟೆ |
| 11 | ಪ್ರಭುಲಿಂಗೇಶ್ವರ ಶುಗರ್ಸ್ | 59.06 | 30.00 | ಬಾಗಲಕೋಟೆ |
| 12 | ಬಾದಾಮಿ ಶುಗರ್ಸ್ | 19.06 | 10.00 | ಬಾಗಲಕೋಟೆ |
| 13 | ಶಿರಗುಪ್ಪ ಶುಗರ್ಸ್ | 4.59 | 4.59 | ಬಳ್ಳಾರಿ |
| 14 | ನಂದಿ ಸ.ಸ.ಕಾ. | 134.68 | 70.00 | ಬಿಜಾಪುರ |
| 15 | ಶ್ಯಾಮನೂರು ಶುಗರ್ಸ್ | 32.45 | 20.00 | ದಾವಣಗೆರೆ |
| 16 | ರೇಣುಕಾ ಶುಗರ್ಸ್, ಆಳಂದ | 41.59 | 25.00 | ಗುಲ್ಬರ್ಗಾ |
| 17 | ರೇಣುಕಾ ಶುಗರ್ಸ್ ಅಫಜಲ್‌ಪುರ | 58.36 | 35.00 | ಗುಲ್ಬರ್ಗಾ |
| 18 | ಹೇಮಾವತಿ ಸ.ಸ.ಕಾ | 29.98 | 20.00 | ಹಾಸನ |
| 19 | ಬನ್ನಾರಿಅಮ್ಮನ್ ಶುಗರ್ಸ್ | 238.90 | 122.45 | ಮೈಸೂರು |
| 20 | ಮೈಸೂರು ಸಕ್ಕರೆ ಕಾರ್ಖಾನೆ | 19.82 | 19.82 | ಮಂಡ್ಯ |
| 21 | ಎಸ್.ಸಿ.ಎಂ. ಶುಗರ್ಸ್ | 10.14 | 10.14 | ಮಂಡ್ಯ |
| | ಒಟ್ಟು | 1902.44 | 1000.00 | |

**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 857

## COMMERCE & INDUSTRIES SECRETARIAT

**Sub :** Transfer of Mining lease No. 2566 held by Shri M. Chennakesava Reddy, in favour of M/s Lakshmi Narasimha Mining Company Pvt. Ltd., Bangalore.

**Read :** Letter No. ಗಭೂಇ:ಗಗುಸಂ. 2566 ವರ್ಗಾವಣೆ:07-08:3590 Dated: 31.3.2008 of the Director of Mines and Geology, Bangalore

**Preamble:**

The Director of Mines and Geology, Bangalore in his letter read above has stated that Shri M. Chennakesava Reddy is holding Mining lease No. 2566 for Iron ore, over an area of 7.85 hectares in Sy. No. 64 and 109 of Kenkere and Lakkihalli villages, Hosadurga taluk, Chitradurga District for a period of 20 years w.e.f. 08-06-1977. The lessee has requested to transfer of Mining Lease No. 2566 in favour of M/s

Lakshmi Narasimha Mining Company Pvt. Ltd., Bangalore, for systematic and scientific manner for conservation of Mineral Wealth available in the area to have optimum utilization of the mineral wealth. M/s Lakshmi Narasimha Mining Company Pvt.Ltd., have also agreed to take over the Mining lease on transfer as per Rule 37 of MC Rules, 1960 subject to terms and conditions of mining lease Since both the applicants have fulfilled all the requirements as per MC Rules, 1960 the Director of Mines and Geology has recommended to the Government for transfer of Mining Lease No. 2566 held by Shri M. Chennakesava Reddy in favour of Ms Lakshmi Narasimha Mining Company Pvt. Ltd., Bangalore as per rule 37 of M.C. Rules, 1960

The proposal has been examined

**Government Order No. CI. 171:MMM. 2008, Bangalore, Dated:27th May 2008**

In the circumstances explained in the preamble, the Government are pleased to accord sanction for transfer of Mining lease No. 2566 held by Shri M. Chennakesava Reddy in Sy.No. 64 and 109 of Kenkere and Lakkihalli villages of Hosadurga taluk, Chitradurga District over an area of 7.85 hectares acres in favour Ms Lakshmi Narasimha Mining Company Pvt. Ltd., Bangalore for the unexpired period of the lease i.e., up to 7-6-2017 under Rule 37 (1)(a) of MCR., 1960 subject to the conditions that the Transferee shall accept all the conditions and liabilities which the Transferor was having in respect of the said mining lease.

By Order and in the name of the President of India,

**M. VASUDEVAMURTHY**

P.R. 858

Under Secretary to Government(Mines)

Commerce & Industries Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಸಚಿವಾಲಯ**

**ವಿಷಯ:** ಕರ್ನಾಟಕ ಸಾಮಾನ್ಯ ಸೇವೆಗಳು (ಅಭಿವೃದ್ಧಿ ವಿಭಾಗ ಮತ್ತು ಸ್ಥಳೀಯ ಸರ್ಕಾರ ವಿಭಗ) (ನೇಮಕಾತಿ) ತಿದ್ದುಪಡಿ ನಿಯಮ ಗ್ರಾಮ ಪಂಚಾಯತಿ ಕಾರ್ಯದರ್ಶಿ–ಕಮ್–ಗ್ರಾಮೀಣಾಭಿವೃದ್ಧಿ ಸಹಾಯಕರ ಹುದ್ದೆಗಳ ಭರ್ತಿ ಮಾಡಲು ಹೊರಡಿಸಲಾಗಿದ್ದ ಕಾರ್ಯಕಾರಿ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 571 ಗ್ರಾಪಂಕಾ 2006, ದಿನಾಂಕ:5–10–2007

**ಪ್ರಸ್ತಾವನೆ:**

ಗ್ರಾಮ ಪಂಚಾಯತಿ ಕಾರ್ಯದರ್ಶಿ ಹುದ್ದೆಗಳ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಮಾರ್ಪಡಿಸಿ ಮೇಲೆ ಓದಲಾಗಿರುವ ಕಾರ್ಯಕಾರಿ ಆದೇಶವನ್ನು ಹೊರಡಿಸಲಾಗಿತ್ತು. ಈ ಆದೇಶವನ್ನು ಹಿಂಪಡೆಯುವ ಬಗ್ಗೆ ಸರ್ಕಾರ ಪರಿಶೀಲಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರ ಆದೇಶ ಸಂಖ್ಯೆ : ಗ್ರಾಪಅ 162 ಗ್ರಾಪಂಕಾ 07, ಬೆಂಗಳೂರು, ದಿನಾಂಕ :15ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೇಲೆ ಓದಲಾದ ಸರ್ಕಾರದ ಕಾರ್ಯಕಾರಿ ಆದೇಶ ಸಂಖ್ಯೆ ಗ್ರಾಅಪ 571 ಗ್ರಾಪಂಕಾ 2006, ದಿನಾಂಕ:5–10–2007 ಅನ್ನು ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 860

**ಬಿ. ವೀರಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ 2007–08ನೇ ಸಾಲಿನ ಮೊದಲನೇ ಕಂತಿನ ರಾಜ್ಯದ ಪಾಲಿನ ಬಾಕಿ ಅನುದಾನವನ್ನು 2008–09ನೇ ಸಾಲಿನಲ್ಲಿ ರಾಜ್ಯದ 4 ಜಿಲ್ಲೆಗಳಿಗೆ ಬಿಡುಗಡೆ ಮಾಡುವ ಬಗ್ಗೆ

**ಉಲ್ಲೇಖ:** 1. ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:9–10–2007

2 ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ/35/ಉಖಾಯೋ/08/ಬೆಂಗಳೂರು ದಿನಾಂಕ:17–4–2008.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ರಾಜ್ಯದ ಎಲ್ಲಾ 29 ಜಿಲ್ಲೆಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕೆ ಒಳಪಟ್ಟಿದ್ದು, ಸದರಿ ಯೋಜನೆಯನ್ನು 2008–09ನೇ ಸಾಲಿನಲ್ಲಿ ಮುಂದುವರಿಸಿಕೊಂಡು ಹೋಗುವ ಅವಶ್ಯಕತೆ ಇರುವುದರಿಂದ ಉಲ್ಲೇಖ (2) ರ ಆದೇಶದಲ್ಲಿ ಯೋಜನೆಯನ್ನು ಮುಂದುವರೆಸುವುದಕ್ಕೆ ಅನುಮೋದನೆಯನ್ನು ನೀಡಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ–ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ 2007–08ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ರೂ. 10082.58 ಲಕ್ಷಗಳನ್ನು ಮೊದಲನೇ ಕಂತಾಗಿ ರಾಜ್ಯದ 6 ಜಿಲ್ಲೆಗಳಿಗೆ ಬಿಡುಗಡೆ ಮಾಡಿದ್ದು, 2007–08ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಎಸ್ ಜಿಆರ್ ವೈ ಲೆಕ್ಕಶೀರ್ಷಿಕೆ 2505–60–196–6–04 ರಡಿ ಲಭ್ಯವಿರುವ ಅನುದಾನದಿಂದ ರಾಜ್ಯದ ಪಾಲಿನ ಭಾಗಶಃ ಅನುದಾನವಾದ ಒಟ್ಟು ರೂ. 736.58 ಲಕ್ಷಗಳನ್ನು ಉಲ್ಲೇಖ (1)_ ರನ್ವಯ ಬಿಡುಗಡೆಗೊಳಿಸಲಾಗಿತ್ತು. ಪ್ರಸ್ತುತ, 2008–09ನೇ ಸಾಲಿನಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಲೆಕ್ಕಶೀರ್ಷಿಕೆ 2505–02–101–0–01–059 ರಡಿ ಒದಗಿಸಿರುವ ಅನುದಾನದಲ್ಲಿ ರಾಜ್ಯದ ಪಾಲಿನ ಮೊದಲನೇ ಕಂತಿನ ಬಾಕಿ ಅನುದಾನವಾದ ಒಟ್ಟು ರೂ. 271.68 ಲಕ್ಷಗಳನ್ನು ಈಗ ಬಿಡುಗಡೆಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರ ಆದೇಶ ಸಂಖ್ಯೆ : ಗ್ರಾಅಪ 60 ಉಖಾಯೋ 2007 (07–ಮೊ.ಕ) ಬೆಂಗಳೂರು, ದಿನಾಂಕ : 21ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರದ ಆದೇಶದ ರೀತ್ಯಾ, ಸಾಮಗ್ರಿಗಳ ಘಟಕದ ವೆಚ್ಚಕ್ಕಾಗಿ ಅನುಬಂಧದಲ್ಲಿ ನಮೂದಿಸಿದಂತೆ ರಾಜ್ಯದ ಪಾಲಿನ ಮೊದಲನೇ ಕಂತಿನ ಬಾಕಿ ಅನುದಾನವಾದ ರೂ. 271.68 ಲಕ್ಷಗಳು (ರೂ.ಎರಡು ಕೋಟಿ ಎಪ್ಪತ್ತೊಂದು ಲಕ್ಷ ಅರವತ್ತೆಂಟು ಸಾವಿರ ಮಾತ್ರ) ರಾಜ್ಯದ 4 ಜಿಲ್ಲೆಗಳಿಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14–7–2005 ಮತ್ತು ಸುತ್ತೋಲೆ ಸಂಖ್ಯೆ ಆಇ 1 ಜಿಪಅ 07 ದಿನಾಂಕ:19–1–2007 ರ ಸುತ್ತೋಲೆಗಳ ಪ್ರಕಾರ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ 2505 ಗ್ರಾಮೀಣ ಉದ್ಯೋಗ 02–ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101–ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ–059 ಇತರೆ ಖರ್ಚು (ಯೋಜನೆ)(2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007 ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು.. ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳಾದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/170/ಪಿಬಿಎಸ್/2008 ದಿನಾಂಕ:17–4–2008 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಎಂ ಶಿರೋಳ್**

ನಿರ್ದೇಶಕರು,

ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ

ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ANNEXURE TO G.O.NO. RDP/60/NRE/2007-(07-FI) BANGALORE DATED:21-4-2008**

**Statement showing the release of 1st instalment balance State Share of 2007-08 under NREGA released during-2008-09**

**(Rs in Lakhs)**

| Sl. No | District | Central Share released dt:7-6-07 | State share proposed against col(4) | State share already released in previous order dt:9-10-2007 | Balance Stateshare being released in this order under H/A 2505-02-101-0-01059 |
|---|---|---|---|---|---|
| 1 | 2 | 3 | 4 | 5 | 6 |
| 1 | Hassan | 1652.51 | 165.25 | 164.06 | 1.19 |
| 2 | Chikamangalore | 1152.97 | 115.30 | 112.42 | 2.88 |
| 3 | Belgaum | 3648.41 | 364.84 | 172.59 | 192..25 |
| 4 | Shimoga | 1728.16 | 172.82 | 97.46 | 75.36 |
| | | 8182.05 | 818.21 | 546.53 | 271.68 |

**C.M. SHIROL**

P.R. . 861

Project, Planning & Monitoring Unit, And
E/O Addl, Secretary to Govt.,Rural Development & P. Raj Dept.

**ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಸಚಿವಾಲಯ**

**ವಿಷಯ:** 2008–09ನೇ ಸಾಲಿನ ಶಾಸನಬದ್ಧ ಅನುದಾನ–ಮೊದಲನೇ ತ್ರೈಮಾಸಿಕ ಕಂತನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 129 ಗ್ರಾಪಂಕಾ 2002(3) ದಿನಾಂಕ:2–12–2003
2 ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 234 ಗ್ರಾಪಂಅ 2007, ದಿನಾಂಕ:27–3–2008.
3 ಆರ್ಥಿಕ ಇಲಾಖೆ ಅ.ಟಿ.ಸಂಖ್ಯೆ. ಆಇ 363 ವೆಚ್ಚ–6/2008, ದಿನಾಂಕ:14.5.2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯಿಸ್ ರಸೀದಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಅಧೀನ ಕಾರ್ಯದರ್ಶಿ (ಜಿ.ಪಂ) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ ರವರಿಗೆ ಸರ್ಕಾರವು ಆದೇಶಿಸಿದೆ.

2008–09ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಅಡಿ ಒಟ್ಟಾರೆ ರೂ. 34,219.61 ಲಕ್ಷಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯಿತಿಗೆ ವಾರ್ಷಿಕವಾಗಿ ತಲಾ ರೂ. 6.00 ಲಕ್ಷಗಳು ಲಭ್ಯವಾಗುತ್ತದೆ. ಈ ಸಾಲಿನ ಮೊದಲನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕ ಶೀರ್ಷಿಕೆಯಿಂದ ಒಟ್ಟು ರೂ. 8442.00 ಲಕ್ಷಗಳನ್ನು ಆರ್ಥಿಕ ಇಲಾಖೆಯು ಮೇಲೆ ಓದಲಾದ (3) ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಸಹಮತಿ ನೀಡಿದೆ. ಪ್ರಸ್ತುತ ರಾಜ್ಯದಲ್ಲಿ 5628 ಗ್ರಾಮ ಪಂಚಾಯಿತಿಗಳಿರುವುದರಿಂದ ಪ್ರತಿ ಗ್ರಾಮ ಪಂಚಾಯಿತಿಗೆ ಪ್ರತಿ ಕಂತಿಗೆ ರೂ. 1.50 ಲಕ್ಷಗಳಂತೆ ರೂ. 84.42 ಕೋಟಿಗಳನ್ನು ಬಿಡುಗಡೆಗೊಳಿಸಲು ಪರಿಶೀಲಿಸಲಾಗಿದ್ದು, ಸದರಿ ಅನುದಾನವನ್ನು ಮೇಲೆ ಓದಲಾದ (2) ರ ಸರ್ಕಾರದ ಆದೇಶದಂತೆ, ಗ್ರಾಮಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಪ್ರಸ್ತುತ ಗ್ರಾಮ ಪಂಚಾಯಿತಿಗಳ ಏಪ್ರಿಲ್ 2008 ರಿಂದ ಜೂನ್ 2008ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರ ಆದೇಶ ಸಂಖ್ಯೆ : ಗ್ರಾಅಪ 168 ಗ್ರಾಪಂಅ 2008 ಬೆಂಗಳೂರು, ದಿನಾಂಕ : 20ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರತಿ ಗ್ರಾಮ ಪಂಚಾಯಿತಿಗೆ 2008–09ನೇ ಸಾಲಿನ ಶಾಸನಬದ್ಧ ಅನುದಾನದ ಮೊದಲನೇ ತ್ರೈಮಾಸಿಕ ಕಂತಿನ ಮೊತ್ತ ರೂ. 8442.00 ಲಕ್ಷಗಳನ್ನು (ಎಂಟು ಸಾವಿರದ ನಾಲ್ಕು

ನೂರ ನಲವತ್ತೆರಡು ಲಕ್ಷ ರೂಪಾಯಿಗಳು) 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ. ಈ ಅನುದಾನದ ಮೊತ್ತವನ್ನು ಪೇಯೀಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್ ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ತಲಾ ರೂ. 1.50 ಲಕ್ಷದಂತೆ ಮೊದಲನೇ ತ್ರೈಮಾಸಿಕ ಕಂತಿನ ಅನುದಾನವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿನ ಷರತ್ತುಗಳನ್ನು ಪಾಲಿಸುವ ನಿಬಂಧನೆಗಳಿಗೊಳಪಟ್ಟು, ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಪ್ರಸ್ತುತ ಗ್ರಾಮ ಪಂಚಾಯಿತಿಗಳ ಏಪ್ರಿಲ್ 2008 ರಿಂದ ಜೂನ್ 2008ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 363 ವೆಚ್ಚ 6/2008, ದಿನಾಂಕ:14.05.2008ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 862

**ಬಿ. ವೀರಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ರವೀಂದ್ರ ಕಲಾಕ್ಷೇತ್ರದ ಧ್ವನಿ, ಬೆಳಕು ಶಿಲ್ಪವನ ಹಾಗೂ ಸ್ವಚ್ಛತೆಯ ನಿರ್ವಹಣೆಗೆ ಖಾಸಗಿ ಏಜೆನ್ಸಿಯ ಮೂಲಕ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಡಿ/161/ಇವೈಡಬ್ಲೂ/1979 ದಿನಾಂಕ:9–8–79.
2 ಸರ್ಕಾರಿ ಆದೇಶ ಸಂಖ್ಯೆ:ಇಡಿ/137/ಎಂಎಸ್ಎ/1979 ದಿನಾಂಕ:9–11–79
3 ಸರ್ಕಾರಿ ಆದೇಶ ಸಂಖ್ಯೆ:ಸಂಕಇ 112 ಕಸನಿ 96 ದಿನಾಂಕ:31.7.96
4 ಸರ್ಕಾರಿ ಆದೇಶ ಸಂಖ್ಯೆ: :ಸಂಕಇ 91 ಕಸನಿ 99 ದಿನಾಂಕ:2.7.99
5 ಸರ್ಕಾರಿ ಆದೇಶ ಸಂಖ್ಯೆ: :ಸಂಕಇ 8 ಸ್ವೀಮರ 2005 ದಿನಾಂಕ:16.9.2005
6 ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ:ಕಸಇ/ ರಕ/ 31/ ನಿರ್ವಹಣೆ/ ಸ್ವಚ್ಛತೆ/2006–07 ದಿನಾಂಕ:2.1.2007

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರವೀಂದ್ರ ಕಲಾಕ್ಷೇತ್ರದ ಉಸ್ತುವಾರಿಯನ್ನು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಿಂದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಕ್ಕೆ ವರ್ಗಾಯಿಸಲಾಯಿತು. ಆ ಸಂದರ್ಭದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಒಟ್ಟು 14 ಮಂದಿ ಸಿಬ್ಬಂದಿಯನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ವಶಕ್ಕೆ ನೀಡಲಾಯಿತು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರವೀಂದ್ರ ಕಲಾಕ್ಷೇತ್ರದ ನಿರ್ವಹಣೆಗೆ 1) ಚೀಫ್ ಎಲೆಕ್ಟ್ರೀಷಿಯನ್ 2) ಅಸಿಸ್ಟೆಂಟ್ ಎಲೆಕ್ಟ್ರೀಷಿಯನ್ 3) ಸೌಂಡ್ ಅಪರೇಟರ್ 4) ಕಾರ್ಪೆಂಟರ್ ಕಂ ಸ್ಟೇಜ್ ಸೆಟ್ಟರ್ ಎಂಬ ನಾಲ್ಕು ಹುದ್ದೆಗಳನ್ನು ಸೃಜಿಸಲಾಯಿತು.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದ ಕೆಲವು ಹುದ್ದೆಗಳ ಪದನಾಮವನ್ನು ಮರುಪದನಾಮಿಗೊಳಿಸಲಾಯಿತು. ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸಿಬ್ಬಂದಿಯಲ್ಲಿ ಶೇಕಡ 5ರಷ್ಟು ಸಿಬ್ಬಂದಿಯನ್ನು ಕಡಿತಗೊಳಿಸಲಾಯಿತು. ಅದರಲ್ಲಿ ರವೀಂದ್ರ ಕಲಾಕ್ಷೇತ್ರಕ್ಕೆ ಸಂಬಂಧಿಸಿದಂತೆ ಮುಖ್ಯ ಎಲೆಕ್ಟ್ರೀಷಿಯನ್ ಹುದ್ದೆ ಹಾಗೂ ಹಿರಿಯ ಎಲೆಕ್ಟ್ರೀಷಿಯನ್ ಹುದ್ದೆಗಳು ಸಹ ಒಳಗೊಂಡಿದ್ದವು.

ಮೇಲೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ ದಿನಾಂಕ:4.2005ರ ಅಂತ್ಯಕ್ಕೆ ಖಾಲಿ ಇರುವ ಹುದ್ದೆಗಳಲ್ಲಿ ಶೇಕಡ 80 ಹುದ್ದೆಗಳನ್ನು ರದ್ದುಗೊಳಿಸಲಾಯಿತು. ಇದರಲ್ಲಿ ರವೀಂದ್ರ ಕಲಾಕ್ಷೇತ್ರಕ್ಕೆ ಸಂಬಂಧಿಸಿದಂತೆ ಸೌಂಡ್ ಸೂಪರ್ ವೈಸರ್ ಹಾಗೂ ಸ್ಟೇಜ್ ಸೆಟ್ಟರ್ ಹುದ್ದೆಗಳು ರದ್ದುಗೊಂಡವು.

ಮೇಲೆ (6)ರಲ್ಲಿ ಓದಲಾದ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ದಲ್ಲಿ ರವೀಂದ್ರ ಕಲಾಕ್ಷೇತ್ರದ ನಿರ್ವಹಣೆಯು ಪ್ರಸ್ತುತ ಪರಿಸ್ಥಿತಿಯಲ್ಲಿ ಅತ್ಯಂತ ಕಷ್ಟಕರವಾಗಿದ್ದು ಈ ಕೆಳಕಂಡ ಒಟ್ಟು 16 ಹುದ್ದೆಗಳು ಅಗತ್ಯವಿದ್ದು ಸದರಿ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗುವುದೆಂದು ಪ್ರಸ್ತಾಪಿಸಿರುತ್ತಾರೆ.

| ಹುದ್ದೆ | ಸಂಖ್ಯೆ |
|---|---|
| 1) ಎಲೆಕ್ಟ್ರಿಕಲ್ ಇಂಜಿನಿಯರ್ | 1 |
| 2) ಹಿರಿಯ ಎಲೆಕ್ಟ್ರೀಷಿಯನ್ | 1 |
| 3) ಸೌಂಡ್ ಸೂಪರ್ ವೈಸರ್ | 1 |
| 4) ವೈರ್ ಮನ್ | 2 |
| 5) ಎಲೆಕ್ಟ್ರೀಷಿಯನ್ | 1 |
| 6) ಸ್ವಚ್ಛತಾ ಮತ್ತು ಅಗ್ನಿಶಾಮಕ ಸಿಬ್ಬಂದಿ | 7 |
| 7) ತೋಟದ ಮಾಲಿಗಳು | 3 |
| ಒಟ್ಟು | 16 |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 6 ಕಸನಿ 2007 ದಿನಾಂಕ:16ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರವೀಂದ್ರ ಕಲಾಕ್ಷೇತ್ರದ ಸುಗಮ ನಿರ್ವಹಣೆಯ ಸಲುವಾಗಿ ಕೆಳಕಂಡ 16 ಹುದ್ದೆಗಳನ್ನು ಹೊರಗುತ್ತಿಗೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಹುದ್ದೆ | ಸಂಖ್ಯೆ |
|---|---|
| 1) ಎಲೆಕ್ಟ್ರಿಕಲ್ ಇಂಜಿನಿಯರ್ | 1 |
| 2) ಹಿರಿಯ ಎಲೆಕ್ಟ್ರೀಷಿಯನ್ | 1 |
| 3) ಸೌಂಡ್ ಸೂಪರ್ ವೈಸರ್ | 1 |
| 4) ವೈರ್ ಮನ್ | 2 |
| 5) ಎಲೆಕ್ಟ್ರೀಷಿಯನ್ | 1 |
| 6) ಸ್ವಚ್ಛತಾ ಮತ್ತು ಅಗ್ನಿಶಾಮಕ ಸಿಬ್ಬಂದಿ | 7 |
| 7) ತೋಟದ ಮಾಲಿಗಳು | 3 |
| ಒಟ್ಟು | 16 |

ಇದಕ್ಕೆ ತಗಲುವ ವೆಚ್ಚ ರೂ. 16.14.000/–(ಹದಿನಾರು ಲಕ್ಷದ ಹದಿನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ರವೀಂದ್ರ ಕಲಾಕ್ಷೇತ್ರ ನಿರ್ವಹಣೆಗಾಗಿ ಒದಗಿಸಲಾಗಿರುವ ಆಯವ್ಯಯದಡಿಯಲ್ಲಿಯೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 352 ವೆಚ್ಚ–5/2008 ದಿನಾಂಕ:27.3.2008ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 859

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ–ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 130 ಎಸ್ಇಎನ್ 03 ದಿನಾಂಕ:8–6–2007

2 ಶ್ರೀ ಸೋಸಲೆ ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕ:27.3.2008.

**ಪ್ರಸ್ತಾವನೆ:**

ಶ್ರೀಮತಿ ಎಸ್. ಇಂದುಮತಿ ಸರ್ಕಾರದ ಉಪ ಕಾರ್ಯದರ್ಶಿ ಇವರು ಈ ಹಿಂದೆ ಕಂದಾಯ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಬೆಂಗಳೂರು ನಗರದ ಸಂಪಿಗೆ ರಸ್ತೆಯಲ್ಲಿರುವ ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಾಲಯಕ್ಕೆ ಸೇರಿದ 4,000 ಚದರ ಮೀಟರ್ ಖಾಲಿ ನಿವೇಶನವನ್ನು ಹರಾಜು ಮೂಲಕ ಗುತ್ತಿಗೆ ನೀಡಲು ಸಚಿವ ಸಂಪುಟದ ಮುಂದೆ ಪ್ರಸ್ತಾವನೆ ಮಂಡಿಸುವಂತೆ ಅಂದಿನ ಮುಜರಾಯಿ ಸಚಿವರು ನೀಡಿದ ಆದೇಶಕ್ಕೆ ವ್ಯತಿರಿಕ್ತವಾಗಿ ಅದನ್ನು ಅಂದಿನ ಕಾರ್ಯದರ್ಶಿಗಳ ಅನುಮೋದನೆ ಪಡೆದು ಸದರಿ ಜಾಗವನ್ನು ಗುತ್ತಿಗೆಗೆ ನೀಡುವ ಬದಲು

ಹರಾಜು ಮಾಡುವಂತೆ ದಿನಾಂಕ:26.2.1999ರ ಪತ್ರವನ್ನು ಹೊರಡಿಸಲು ಕಾರಣರಾದ ಹಾಗೂ ಇನ್ನೊಂದು ಪ್ರಕರಣದಲ್ಲಿ ಅನುಕಂಪದ ಆಧಾರದ ಮೇಲೆ ಗ್ರಾಮಲೆಕ್ಕಿಗರಾಗಿ ನೇಮಕಗೊಂಡ ಹಾವೇರಿ ತಾಲ್ಲೂಕು ಹೊರಗುಂದ ಗ್ರಾಮದ ಶ್ರೀ ಪಿ.ಡಿ. ಉಮಾಪತಿ ಅವರು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಬದಲಿ ನೇಮಕಾತಿ ಕೋರಿ ಸಲ್ಲಿಸಿದ ಅರ್ಜಿಯನ್ನು ನಿಯಮಾನುಸಾರ ಪರಿಶೀಲಿಸಿ ಮೇಲಾಧಿಕಾರಿಗಳ ಗಮನಕ್ಕೆ ತರದೇ ಬದಲಿ ಹುದ್ದೆಗೆ ನೇಮಿಸುವಂತೆ ಅವರ ಹಂತದಲ್ಲಿಯೇ ದಿನಾಂಕ:2–8–2000 ರ ಪತ್ರದಲ್ಲಿ ಹಾವೇರಿ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಿ ಅನಂತರ ಕಡತವನ್ನು ನಾಶಪಡಿಸಿ ದುರ್ನಡತೆ ಎಸಗಿರುವ ಎರಡನೆಯ ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:8–6–2007ರ ಸರ್ಕಾರದ ಆದೇಶದಲ್ಲಿ ಶ್ರೀ ಸೋಸಲೆ ಇಂದುಧರ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ:27–3–2008ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ, ಆರೋಪಿತರ ವಿರುದ್ಧ ಮಾಡಲಾದ ಆರೋಪಗಳ ಕುರಿತು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

1) ಧಾರ್ಮಿಕದತ್ತಿ ಆಯುಕ್ತರು ವಿಷಯವನ್ನು ಪರಿಶೀಲಿಸಿ ಸದರಿ ಜಾಗವನ್ನು ವಾಣಿಜ್ಯ ಉದ್ದೇಶಕ್ಕಾಗಿ ನೀಡಬೇಕಾದ್ದಲ್ಲಿ ಬಹಿರಂಗ ಹರಾಜು ಮಾಡುವುದು ಸೂಕ್ತವಾಗಿರುತ್ತದೆಯೆಂದು ಅಭಿಪ್ರಾಯವನ್ನು ಪಟ್ಟಿರುತ್ತಾರೆ. ಸದರಿ ಅಭಿಪ್ರಾಯವನ್ನು ಆದೇಶಕ್ಕಾಗಿ ಮಂಡಿಸಿದ್ದಾರೆ. ಅನಂತರ ದಿನಾಂಕ:26.2.1999ರ ಪತ್ರವನ್ನು ಶ್ರೀ ಎಲ್. ಶ್ರೀನಿವಾಸನ್ ಎಂಬ ಅಧೀನ ಕಾರ್ಯದರ್ಶಿಯವರು ಹೊರಡಿಸಿದ್ದಾರೆ. ಸಾಕ್ಷ್ಯ ನೀಡಿದ ಯಾವ ಅಧಿಕಾರಿ ನೌಕರರು ಸಹ ಸಚಿವ ಸಂಪುಟದ ಮುಂದೆ ಪ್ರಸ್ತಾವನೆಯನ್ನು ಮಂಡಿಸುವಂತೆ ಅಂದಿನ ಮುಜರಾಯಿ ಸಚಿವರು ನಿರ್ದೇಶನ ನೀಡಿದ ಕುರಿತು ಏನೂ ಹೇಳಿರುವುದಿಲ್ಲ. ಆದ್ದರಿಂದ ಅವರು ಪತ್ರವನ್ನು ಹೊರಡಿಸಿದ್ದರು ಹಾಗೂ ಮೇಲಾಧಿಕಾರಿಗಳನ್ನು ತಪ್ಪು ದಾರಿಗೆ ಎಳೆದರು ಎಂಬ 1ನೇ ಆರೋಪವು ಸಾಬೀತಾಗುವುದಿಲ್ಲ.

2) 2ನೇ ಆರೋಪದ ವಿಚಾರಣೆಯು ಕಡತ ಸಂಖ್ಯೆ: ಕಂಇ 162 ಎಂವಿಎಸ್ 2000ದ ಚಲನವಲನ ಪುಸ್ತಕದ ಮೇಲೆ ಆಧರಿಸಲ್ಪಟ್ಟಿದೆ. ದಿನಾಂಕ:25–8–2000 ರಲ್ಲಿ ಪತ್ರವನ್ನು ಹೊರಡಿಸಲಾಗಿದೆ ಎಂದು ಆರೋಪಿಸಲಾಗಿದೆ. ಆದರೆ ಕಡತದ ಚಲನವಲನ ಪುಸ್ತಕವನ್ನು ಪರಿಶೀಲಿಸಿದಂತೆ ಸದರಿ ದಿನಾಂಕದಂದು ಸದರಿ ಕಡತವು ಉಪ ಕಾರ್ಯದರ್ಶಿ ಅವರ ಬಳಿ ಇದ್ದಿತ್ತು. ಆದ್ದರಿಂದ ಆರೋಪಿಯು ದಿನಾಂಕ:25–8–2000 ರಂದು ಪತ್ರವನ್ನು ಹೊರಡಿಸಿದ ಸಾಧ್ಯತೆಯಿಲ್ಲ ಪ್ರಕರಣದ ಸಾಕ್ಷಿದಾರರು ಸಹ ಕಡತದ ಚಲನವಲನದ ಬಗ್ಗೆಯಾಗಲೀ ಸದರಿ ಕಡತವು ಆರೋಪಿಯ ಸ್ವಾಧೀನದಲ್ಲಿದ್ದ ಬಗ್ಗೆಯಾಗಲೀ ಯಾವುದೇ ಸಾಕ್ಷಿ ನೀಡಿಲ್ಲ ಈ ಕಾರಣಗಳಿಂದಾಗಿ 2ನೇ ಆರೋಪವು ಸಹ ಸಾಭೀತಾಗಿರುವುದಿಲ್ಲ.

ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 130 ಎಸ್‌ಇಎನ್ 03 ಬೆಂಗಳೂರು, ದಿನಾಂಕ:24ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನಲೆಯಲ್ಲಿ ಶ್ರೀಮತಿ ಎಸ್. ಇಂದುಮತಿ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ದಿನಾಂಕ:8–6–2007ರ ಸರ್ಕಾರದ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ. ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಸದರಿ ಅಧಿಕಾರಿಯವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 863

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎ. ರಾಜಗೋಪಾಲರ್, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತು.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರ ಪತ್ರ ಸಂ:ಇಎಸ್‌ಟಿ (2)70/2005–06, ದಿನಾಂಕ:17–4–2006.
2 ಸರ್ಕಾರದ ಆದೇಶ ಸಂ:ಕಂಇ 240 ಎಡಿಇ 2005, ದಿನಾಂಕ:3–8–2006
3 ಸರ್ಕಾರದ ಕಾರಣ ಕೇಳುವ ನೋಟೀಸು ದಿನಾಂಕ:11–12–2006.
4 ಶ್ರೀ ರಾಜಗೋಪಾಲರ್, ನಿವೃತ್ತ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ:21.12.2006.

**ಪ್ರಸ್ತಾವನೆ:**

ಶ್ರೀ ರಾಜಗೋಪಾಲ್, ನಿವೃತ್ತ ತಹಶೀಲ್ದಾರ್, ಇವರು ಹಿಂದೆ ಪಾಂಡವಪುರ ತಾಲ್ಲೂಕಿನ ತಹಶೀಲ್ದಾರರಾಗಿದ್ದಾಗ, ಚಿನಕುರಳಿ ಹೋಬಳಿ ಡಿಂಕಾಕಾವಲ್ ಗ್ರಾಮದ ಸ.ನಂ. 19ರ 4–01ಎಕರೆ–ಗುಂಟೆ ಸರ್ಕಾರಿ ಕೆರೆ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು, ಸಾರ್ವಜನಿಕ ಆಸ್ತಿಯನ್ನು ಸಾರ್ವಜನಿಕ ಉದ್ದೇಶಕ್ಕೆ ರಕ್ಷಿಸುವ ಬಗ್ಗೆ ಕರ್ತವ್ಯ ಲೋಪವೆಸಗಿ 1966ರ ಕೆ.ಸಿ.ಎಸ್. (ನಡತೆ) ನಿಯಮಾವಳಿಗಳ ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿದ್ದಾರೆಂದು ಇವರ ವಿರುದ್ಧ ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ. (1), ದಿನಾಂಕ:17–4–2006ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಶ್ರೀ ರಾಜಗೋಪಾಲ್, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು ಇವರು ಈಗಾಗಲೇ ದಿನಾಂಕ:30–6–2005 ರಂದು ವಯೋ ನಿವೃತ್ತಿ ಹೊಂದಿದ್ದರಿಂದ ಮೇಲೆ ಓದಲಾದ ಕ್ರ.ಸಂ. (2) ದಿನಾಂಕ:10–10–2006ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಬೇಕೆಂದು ಆದೇಶವಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (3) ದಿನಾಂಕ:11–12–2006ರನ್ವಯ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4 ರವರೆಗೆ) ಶ್ರೀ ರಾಜಗೋಪಾಲ್, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು ಇವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲಾಗಿತ್ತು. ಮೇಲೆ ಓದಲಾದ ಕ್ರ.ಸಂ: (4)ರಲ್ಲಿ ಶ್ರೀ ರಾಜಗೋಪಾಲ್, ನಿವೃತ್ತ ತಹಶೀಲ್ದಾರ್ ಇವರ ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖೆ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 45 ಎಡಿಇ 2005, ಬೆಂಗಳೂರು, ದಿನಾಂಕ:24ನೇ ಮೇ 2008**

ಪ್ರಸ್ತಾವನೆಯನ್ನು ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 214ನ್ನು ಓದಿಕೊಂಡು ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಾಜಗೋಪಾಲ, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:1033, 9ನೇ 'ಬಿ' ಮೇನ್ 8ನೇ ಕ್ರಾಸ್, ಜ್ಯೂಡಿಷಿಯಲ್ ಲೇಔಟ್, ಜಿಕೆವಿಕೆ ಪೋಸ್ಟ್, ಬೆಂಗಳೂರು– 560065 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳ ಈ ಪ್ರಕರಣದ ವಿಚಾರಣೆಯನ್ನು ಮಂಡ್ಯ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಜಿಲ್ಲಾಧಿಕಾರಿಗಳು, ಮಂಡ್ಯ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 2005, ದಿ:23–8–2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ಸರ್ಕಾರಿ ಆದೇಶ ಸಂ:ಸಿಆಸುಇ 45 ಸೇಇವಿ 2001, ದಿ:4–3–2002 ರನ್ವಯ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಮಂಡ್ಯ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 864

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಕು. ರೂಪ. ಐ.ಪಿ 2005ನೇ ಸಾಲಿನ ಗೆಜೆಟೆಡ್ ಪ್ರೊಬೇಷನರಿ ತಹಶೀಲ್ದಾರ್ ರವರು ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ದಿನಾಂಕ:22–6–2006ರ ಅಧಿಸೂಚನೆ ಸಂಖ್ಯೆ:ಕಂಇ 110 ಎಎಸ್‌ಡಿ 2006.

2 ಅಧಿಕೃತ ಜ್ಞಾಪನ ಸಂಖ್ಯೆ:ಕಂಇ 135 ಎಎಸ್‌ಡಿ 2006, ದಿನಾಂಕ:25–8–2006

3 ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 265 ಎಎಸ್‌ಡಿ 2007, ದಿನಾಂಕ:15–10–2007

4 ಕು.ರೂಪ ಐ.ಪಿ ಇವರ ಮನವಿ ದಿನಾಂಕ:27–5–2008

**ಪ್ರಸ್ತಾವನೆ:**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ:E(1)41/2005-06/PSC, Dt:4-5-2006 ರನ್ವಯ ಆಯ್ಕೆಗೊಂಡ 2005ನೇ ಸಾಲಿನ 40 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ:22–6–2006ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್–ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ.9) ಕು. ರೂಪ ಐ.ಪಿ. ಇವರು ದಿನಾಂಕ:23–6–2006ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿರುತ್ತಾರೆ.

ಉಲ್ಲೇಖ (2)ರ ಅಧಿಕೃತ ಜ್ಞಾಪನದಲ್ಲಿ ಪರೀಕ್ಷಾರ್ಥ ತಹಶೀಲ್ದಾರರುಗಳಿಗೆ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು ನಂತರ ಜಿಲ್ಲಾ ಮಟ್ಟದ ತರಭೇತಿಗಾಗಿ ಕು. ರೂಪ ಐ.ಸಿ ಇವರನ್ನು ತುಮಕೂರು ಜಿಲ್ಲೆಗೆ ನಿಯೋಜಿಸಲಾಗಿತ್ತು.

ಉಲ್ಲೇಖ (3)ರ ಅಧಿಸೂಚನೆಯಲ್ಲಿ ಕು.ರೂಪ ಐ.ಸಿ ಇವರನ್ನು ವಿಶೇಷ ತಹಶೀಲ್ದಾರ್, ಖಾದಿ ಬೋರ್ಡ್, ಬೆಂಗಳೂರು ಇಲ್ಲಿನ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ. ಅದರಂತೆ ಸದರಿಯವರು ಆ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ಉಲ್ಲೇಖ(4), ದಿನಾಂಕ:27–5–2008ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸುತ್ತಾ, ತಮಗೆ ಸರ್ಕಾರದ ಅಧಿಸೂಚನೆ ಸಂ:ಸಿಆಸುಇ 13 ಆಸೇವ 2008, ದಿನಾಂಕ:24–5–2008ರಲ್ಲಿ ಸಹಾಯಕ ಆಯುಕ್ತರಾಗಿ ಆಯ್ಕೆಗೊಂಡಿರುವುದರಿಂದ, ಸದರಿ ತಹಶೀಲ್ದಾರ್ ಹುದ್ದೆಗೆ ಬೇಷರತ್ ರಾಜೀನಾಮೆಯನ್ನು ನೀಡಿರುವರು ಹಾಗೂ ಈ ರಾಜೀನಾಮೆಯನ್ನು ಅಂಗೀಕರಿಸಬೇಕೆಂದು ಕು. ರೂಪ ಐ.ಪಿ. ಪರೀಕ್ಷಾರ್ಥ ತಹಶೀಲ್ದಾರ್ ಇವರು ಕೋರಿರುತ್ತಾರೆ.

ಸದರಿ ಪರಿವೀಕ್ಷಣಾ ತಹಶೀಲ್ದಾರರ ರಾಜೀನಾಮೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಆರ್‌ಡಿ 216 ಎಎಸ್‌ಡಿ 2008, ದಿನಾಂಕ:29ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕು. ರೂಪಾ. ಐ.ಪಿ. ಪರಿವೀಕ್ಷಣಾ ತಹಶೀಲ್ದಾರ್ 2005ನೇ ತಂಡ ಪ್ರಸ್ತುತ ವಿಶೇಷ ತಹಶೀಲ್ದಾರ್, ಖಾದಿ ಬೋರ್ಡ್, ಬೆಂಗಳೂರು ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 252(ಬಿ) ರನ್ವಯ ದಿನಾಂಕ:30–5–2008 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿ ತಹಶೀಲ್ದಾರ್ ಹುದ್ದೆಯಿಂದ ಇವರನ್ನು ಬಿಡುಗಡೆಗೊಳಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 865

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ಪುರಸಭಾ ತಹಶೀಲ್ದಾರ್, ಶ್ರೀ ಕೆ.ಎಂ. ಶಂಕರಯ್ಯ ಹಿಂದಿನ ಶಿರಸ್ತೇದಾರರು ಮತ್ತು ಶ್ರೀ ಎಸ್ ಮಹದೇವಯ್ಯ, ಪ್ರಥಮ ದರ್ಜೆ ಸಹಾಯಕರು, ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ–ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ –ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ

**ಓದಲಾಗಿದೆ:** 1. ದಿನಾಂಕ:24/26–05–06ರ ನೋಟೀಸು ಸಂಖ್ಯೆ:ಸಿಆಸುಇ 119 ಎಸ್‌ಇಎನ್ 04

2 ಶ್ರೀ ಎನ್ ಎಂ. ನೀಲಕಂಠ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರ ದಿನಾಂಕ:7–8–06 ರ ಉತ್ತರ

3 ಶ್ರೀ ಎನ್ ಪುಟ್ಟಸ್ವಾಮಿ, ಹಿಂದಿನ ಪುರಸಭಾ ತಹಶೀಲ್ದಾರ್ ಇವರ ದಿನಾಂಕ: ಇಲ್ಲ ರ ಉತ್ತರ

4 ಶ್ರೀ ಕೆ.ಎಂ. ಶಂಕರಯ್ಯ, ಹಿಂದಿನ ಶಿರಸ್ತೇದಾರರು ಇವರ ದಿನಾಂಕ:18–8–07ರ ಉತ್ತರ

5 ಶ್ರೀ ಎಸ್ ಮಹದೇವಯ್ಯ, ಪ್ರಥಮ ದರ್ಜೆ ಸಹಾಯಕರು ಇವರ ದಿನಾಂಕ:29–6–06ರ ಉತ್ತರ

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ನೋಟೀಸಿನಲ್ಲಿ, ಶ್ರೀ ಎನ್ ಎಂ ನೀಲಕಂಠ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ ಇಲ್ಲಿ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯಲ್ಲಿ, ಶ್ರೀ ಎನ್. ಪುಟ್ಟಸ್ವಾಮಿ ಇವರು ಪುರಸಭಾ ತಹಶೀಲ್ದಾರ್ ಹುದ್ದೆಯಲ್ಲಿ ಶ್ರೀ ಕೆ. ಎಂ. ಶಂಕರಯ್ಯ ಇವರು ಶಿರಸ್ತೇದಾರರ ಹುದ್ದೆಯಲ್ಲಿ ಮತ್ತು ಶ್ರೀ ಎಸ್ ಮಹದೇವಯ್ಯ ಇವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ. ಇವರುಗಳ ವಿರುದ್ಧ ಜಿಲ್ಲಾಧಿಕಾರಿಗಳ ಕಛೇರಿಯ ಪುರಸಭೆ ಶಾಖೆಯಲ್ಲಿ ಚಾಮರಾಜನಗರ ನಗರ ಸಭೆಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀ ಪಿ ನರಸಿಂಹಮೂರ್ತಿ ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ ನಡೆಯುತ್ತಿದ್ದು, ಇಲಾಖಾ ವಿಚಾರಣೆ ಕಡತ ಸಂಖ್ಯೆ:ಪುರಸಭೆ 40/02–03 ರಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರಡಿ ಅಧಿಕಾರವಿಲ್ಲದಿದ್ದರೂ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರವನ್ನು ಅಕ್ರಮವಾಗಿ ಚಲಾಯಿಸಿರುವ ಆರೋಪದ ಸಂಬಂಧ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಶಿಸ್ತು ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಮೇಲೆ ಕ್ರಮ ಸಂಖ್ಯೆ(2) ರಿಂದ (5) ರವರೆಗಿನ ಉತ್ತರಗಳಲ್ಲಿ ಆರೋಪಿತ ಅಧಿಕಾರಿ/ನೌಕರರು, ಕಾರಣ ಕೇಳುವ ನೋಟೀಸಿಗೆ ಉತ್ತರವಾಗಿ ಸಲ್ಲಿಸಲಾದ ತಮ್ಮ ಸಮಜಾಯಿಷಿಯಲ್ಲಿ, ಇವರುಗಳ ಮೇಲೆ ಹೊರಿಸಲಾದ ಆರೋಪವನ್ನು ನಿರಾಕರಿಸಿರುವ ಕಾರಣ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 40 ಕೆಇವಿ 07 ಬೆಂಗಳೂರು, ದಿನಾಂಕ:8ನೇ ಏಪ್ರಿಲ್ 2008,**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎನ್.ಎಂ. ನೀಲಕಂಠ ಕೆ.ಎ.ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಶ್ರೀ ಎನ್. ಪುಟ್ಟಸ್ವಾಮಿ. ಹಿಂದಿನ ಪುರಸಭಾ ತಹಶೀಲ್ದಾರ್, ಶ್ರೀ ಕೆ.ಎಂ. ಶಂಕರಯ್ಯ ಹಿಂದಿನ ಶಿರಸ್ತೇದಾರರು ಮತ್ತು ಶ್ರೀ ಎಸ್ ಮಹದೇವಯ್ಯ, ಪ್ರಥಮ ದರ್ಜೆ ಸಹಾಯಕರು, ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಇವರುಗಳ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾದ ಆರೋಪಗಳ ಕುರಿತಂತೆ ಜಂಟಿ ವಿಚಾರಣೆ ನಡೆಸಲು ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಇವರು ದಿನಾಂಕ:23.8.05 ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 016 ಸೇಇವಿ 05 ರನ್ವಯ ಗೌರವಧನವಾಗಿ ರೂ. 6000–00 (ಆರು ಸಾವಿರ ರೂಪಾಯಿಗಳು ಮಾತ್ರ) ಗಳು ಮತ್ತು ವಾಹನ ಭತ್ಯೆ ರೂ. 1000–00 ಗಳನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣಾಧಿಕಾರಿಗಳಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಕಂದಾಯ ಇಲಾಖೆಯು ಕ್ರಮ ಕೈಗೊಳ್ಳುತ್ತದೆ. ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 652

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಶಿಕ್ಷಣ ಸಚಿವಾಲಯ**

**ವಿಷಯ:** ಮೊಸಳೆ ಹೊಸಹಳ್ಳಿಯಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕೆ ಪದವಿ ಪೂರ್ವ ಕಾಲೇಜಿಗೆ ಸೇರಿದ 2.20 ಎಕರೆ ಜಮೀನನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು [ಪ್ರೌಢ ಶಿಕ್ಷಣ], ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ಯೋ7 ಸಪ್ರದಕಾ ನಿವೇಶನ 27/2007–08/ದಿನಾಂಕ:10–3–2008

**ಪ್ರಸ್ತಾವನೆ:**

1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು [ಪ್ರೌಢಶಿಕ್ಷಣ] ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಹಾಸನ ಜಿಲ್ಲೆ ಮೊಸಳೆ ಹೊಸಹಳ್ಳಿಯಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗಾಗಿ ಮೊಸಳೆ ಹೊಸಹಳ್ಳಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಸೇರಿರುವ ಜಮೀನಿನ ಸರ್ವೆ ಸಂಖ್ಯೆ:92ರಲ್ಲಿ 2.20 ಎಕರೆ ಜಮೀನನ್ನು ಕಾಲೇಜು ಶಿಕ್ಷಣ ಇಲಾಖೆಗೆ ಹಸ್ತಾಂತರಿಸಬಹುದೆಂದು ಅಭಿಪ್ರಾಯಿಸಿ, ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ:89:ಯೋಸಕ 2008 ಬೆಂಗಳೂರು ದಿನಾಂಕ:2ನೇ ಏಪ್ರಿಲ್ 2008**

[**ಇಡಿ::100ಎ:ಸ್ವೀಮರ(ಯುನಿಕ್) 2008, ದಿನಾಂಕ:2–4–2008**]

**3)** ಮೊಸಳೆ ಹೊಸಹಳ್ಳಿಯಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗಾಗಿ ಮೊಸಳೆ ಹೊಸಹಳ್ಳಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಸೇರಿರುವ ಜಮೀನಿನ ಸರ್ವೆ ಸಂಖ್ಯೆ:92ರಲ್ಲಿ 2.20 ಎಕರೆ ಜಮೀನನ್ನು ಕಾಲೇಜು ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ನಿಯಮಾನುಸಾರ ಕ್ರಮ ಕೈಗೊಳ್ಳಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 655

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಜೆ. ಜಹಾಗೀರ್‌ದಾರ್, ಎಸ್.ಪಿ. ಡಿ.ಸಿ.ಆರ್.ಇ. ದಾವಣಗೆರೆ ರವರ ವಿರುದ್ಧ ಶಿಸ್ತು ಕ್ರಮ–ಇಲಾಖಾ ವಿಚಾರಣೆ ಕುರಿತು–ಆದೇಶ

**ಓದಲಾಗಿದೆ:** 1. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ ಎಸ್ಪಿ& ಮೇಲ್ಪಟ್ಟು/121/07–08, ದಿನಾಂಕ:13–2–2008 ಮತ್ತು 23–4–2008.

**ಪ್ರಸ್ತಾವನೆ:**

ಶ್ರೀ ಹೆಚ್.ಜೆ. ಜಹಾಗೀರ್‌ದಾರ್, ಎಸ್.ಪಿ. ಡಿ.ಸಿ.ಆರ್.ಇ. ದಾವಣಗೆರೆ ರವರ ಜನ್ಮ ದಿನಾಂಕ:2–4–1950 ಆಗಿದ್ದು, ದಿನಾಂಕ:30–4–2008 ರಂದು ಅವರು ವಯೋ ನಿವೃತ್ತಿ ಹೊಂದುವುದು ಸರಿಯಿರುತ್ತದೆ. ಆದರೆ, ಶ್ರೀ ಹೆಚ್.ಜೆ. ಜಹಾಗೀರ್ ದಾರ್, ಎಸ್.ಪಿ. ರವರು ಮನವಿ ಸಲ್ಲಿಸಿ ಅವರ ಜನ್ಮ ದಿನಾಂಕ:2–4–1956 ಆಗಿರುತ್ತದೆಂದು ಮನವಿ ಸಲ್ಲಿಸಿರುತ್ತಾರೆ. ಆ ಬಗ್ಗೆ ಸಂಶಯ ಬಂದುದರಿಂದ, ಸದರಿಯವರು ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ಬಗ್ಗೆ ಹಾಗೂ ಅವರ ಜನ್ಮ ದಿನಾಂಕದ ಬಗ್ಗೆ ರಹಸ್ಯ ಮಾಹಿತಿಗಳನ್ನು ಸಂಬಂಧಿಸಿದ ಶಾಲೆ/ಕಛೇರಿಗಳಿಂದ ಪಡೆಯಲಾಗಿ ಸದರಿ ದಾಖಲೆಗಳ ಪ್ರಕಾರ ಅವರ ಜನ್ಮ ದಿನಾಂಕ:2–4–1950 ಆಗಿರುತ್ತದೆ. ಸದರಿಯವರು 1968ರಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ ತೇರ್ಗಡೆಯಾಗಿರುವುದು ದೃಢಪಡುತ್ತದೆ. ನಿಜವಾದ ಜನ್ಮ ದಿನಾಂಕ:2–4–1950 ಆಗಿದ್ದರೂ ಸದರಿ ಅಧಿಕಾರಿಯು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಅಧಿಕಾರಿಯಾಗಿದ್ದು, ತನ್ನ ಜನ್ಮ ದಿನಾಂಕ ಗೊತ್ತಿದ್ದರೂ ಸಹ ಅವರು ಸಲ್ಲಿಸಿರುವ ಮನವಿಯಲ್ಲಿ ದಿನಾಂಕ:2–4–1956 ಜನ್ಮ ದಿನಾಂಕವಾಗಿರುತ್ತದೆಂದು ಸುಳ್ಳು ಮಾಹಿತಿ ನೀಡಿರುತ್ತಾರೆ. 2001–02ನೇ ಸಾಲಿನ ನಂತರದ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಜನ್ಮ ದಿನಾಂಕವನ್ನು 2–4–1950ಕ್ಕೆ ಬದಲಾಗಿ 2–4–1956 ಎಂದು ಸುಳ್ಳು ಮಾಹಿತಿಯನ್ನು ನಮೂದಿಸಿ ಸರ್ಕಾರವನ್ನು ಉದ್ದೇಶಪೂರ್ವಕವಾಗಿ ವಂಚಿಸಲು ಪ್ರಯತ್ನಿಸಿರುತ್ತಾರೆ. ಇವರ ಸೇವಾ ಪುಸ್ತಕದಲ್ಲಿ ಜನ್ಮ ದಿನಾಂಕವನ್ನು ತಿದ್ದಿರುವುದು ಸಹ ಕಂಡು ಬರುತ್ತದೆ. ಇದು ನಡತೆ ನಿಯಮದ ಉಲ್ಲಂಘನೆಯಾಗಿರುತ್ತದೆ. ಆದುದರಿಂದ ಸದರಿ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಪ್ರಸ್ತಾವನೆ ಸಲ್ಲಿಸುತ್ತಾ ಆರೋಪ ಪಟ್ಟಿ ಹಾಗೂ ಸಂಬಂಧಿಸಿದ ದಾಖಲೆಗಳ ಪ್ರತಿಗಳನ್ನು ಲಗತ್ತಿಸಿರುತ್ತಾರೆ.

ಡಿಜಿ ಮತ್ತು ಐಜಿಪಿ ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಒಇ 107 ಪೊಸಿಪ 2008, ಬೆಂಗಳೂರು ದಿನಾಂಕ:25ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಹೆಚ್.ಜೆ. ಜಹಾಗೀರ್‌ದಾರ್ ಎಸ್.ಪಿ ಡಿ.ಸಿ.ಆರ್.ಇ ದಾವಣಗೆರೆ ರವರ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮ 1965/89ರ ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದೆ. ಹಾಗೂ ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಪೊಲೀಸ್ ಅಧೀಕ್ಷಕರು, ಬಿಜಾಪುರ ಜಿಲ್ಲೆ ರವರನ್ನು ವಿಶೇಷ ಅಧಿಕಾರ ಹೊಂದಿದ ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಈ ಸಂಬಂಧವಾಗಿ ಶ್ರೀ ಹೆಚ್.ಜೆ. ಜಹಾಗೀರ್‌ದಾರ್, ಎಸ್.ಪಿ. ಡಿ.ಸಿ.ಆರ್.ಇ. ದಾವಣಗೆರೆ ಇವರಿಗೆ ದೋಷಾರೋಪಣಾ ಪಟ್ಟಿ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 4 ತಿಂಗಳೊಳಗಾಗಿ ಅಂತಿಮ ವರದಿ ಸಲ್ಲಿಸುವಂತೆ ಸೂಚಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 696

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಾರ್ಮಿಕ ಸಚಿವಾಲಯ**

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಕಾರ್ಯ ನಿರ್ವಹಿಸಿದ/ನಿರ್ವಹಿಸುತ್ತಿರುವ ಸಹಾಯಕ ಉದ್ಯೋಗಾಧಿಕಾರಿಗಳಿಗೆ, ಉದ್ಯೋಗಾಧಿಕಾರಿ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 82 ಇಟಿಎಕ್ಸ್ 1998 ದಿನಾಂಕ 05/01/1999.
2 ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 68 ಇಟಿಎಕ್ಸ್ 1994(1) ದಿನಾಂಕ 08/08/1995.
3 ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 68 ಇಟಿಎಕ್ಸ್ 1994(2) ದಿನಾಂಕ 08/08/1995.
4 ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಗ್ರೂಪ್ 'ಎ' ಮತ್ತು 'ಬಿ' ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಕಾಇ 69 ಇಟಿಎ 93(ಭಾಗ) ದಿನಾಂಕ: 26/07/1999.
5 ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 8200–8202/2005 ರಲ್ಲಿ ನೀಡಿದ ಆದೇಶ ದಿನಾಂಕ:26/09/2006.
6 ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತನಿ/ಉದ್ಯೋಗ/ಆಡಳಿತ–1/ವಿವ–84/98–99. ದಿನಾಂಕ:21/06/2007.
7 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 152 ಸಿಎನ್‌ಎಸ್ 07 ದಿನಾಂಕ: 29/01/2008.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ(ಉದ್ಯೋಗ ವಿಭಾಗದ) ಸಹಾಯಕ ಉದ್ಯೋಗ ಅಧಿಕಾರಿಗಳಾದ ಶ್ರೀ.ಎಂ.ಬಿ.ನಂಜುಂಡಯ್ಯ, ಶ್ರೀ.ಬಿ.ಈರಪ್ಪ, ಶ್ರೀ ಎಸ್.ಎಸ್.ಸೂರ್ಯವಂಶಿ, ಶ್ರೀ.ಪಿ.ಎಸ್.ಪೊಲೀಸ್ ಪಾಟೀಲ್, ಶ್ರೀ ಎನ್.ಎಸ್.ರಾಮಯ್ಯ ಹಾಗೂ ಶ್ರೀ ಕೆ.ವೆಂಕಟೇಶ್ ಇವರುಗಳಿಗೆ ಮತ್ತು ಮೇಲಿನ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ವೈ.ಹೆಚ್.ಬಾರಕೇರ್ ಮತ್ತು ಶ್ರೀ ಸಿ.ಗುರುಮೂರ್ತಿ ಇವರುಗಳಿಗೆ, ಹಾಗೂ ಮೇಲಿನ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಎ.ಎಂ.ರುದ್ರಪ್ಪ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಉದ್ಯೋಗಾಧಿಕಾರಿ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿತ್ತು.

ಮೇಲಿನ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ (ಉದ್ಯೋಗ ವಿಭಾಗದ) 'ಬಿ' ಸಮೂಹದ ಉದ್ಯೋಗಾಧಿಕಾರಿಗಳಿಗೆ ದಿನಾಂಕ 01/01/1998ಕ್ಕೆ ಅನ್ವಯಿಸುವಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು.

ಸದರಿ ಜೇಷ್ಠತಾ ಪಟ್ಟಿಯನ್ನು ಆಧರಿಸಿ ಶ್ರೀ.ಎಂ.ಬಿ.ನಂಜುಂಡಯ್ಯ, ಶ್ರೀ.ಪಿ.ಎಸ್.ಪೊಲೀಸ್ ಪಾಟೀಲ್ ಹಾಗೂ ಶ್ರೀ ಎನ್.ಎಸ್.ರಾಮಯ್ಯ ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮುಂದೆ ಹೂಡಲಾದ ಅರ್ಜಿ ಸಂಖ್ಯೆ:

8200–8202/2005ರ ಸಂಬಂಧ ಕ್ರಮ ಸಂಖ್ಯೆ: (5) ರಲ್ಲಿ ದಿನಾಂಕ: 26/09/2006 ರಂದು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತನ್ನ ಅಂತಿಮ ಆದೇಶದಲ್ಲಿ ಈ ಬಗ್ಗೆ ಅರ್ಜಿದಾರರ ಮನವಿಗಳನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಆದೇಶಿಸಿದೆ.

ಅದರಂತೆಯೇ, ಮೇಲಿನ ಕ್ರಮ ಸಂಖ್ಯೆ: (6) ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ತಮ್ಮ ಪ್ರಸ್ತಾವನೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಉದ್ಯೋಗಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದ/ನಿರ್ವಹಿಸುತ್ತಿರುವ 09 ಸಹಾಯಕ ಉದ್ಯೋಗಾಧಿಕಾರಿಗಳಿಗೆ ಮೇಲಿನ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ಜೇಷ್ಠತಾ ಪಟ್ಟಿಯನ್ವಯ ಮುಂಬಡ್ತಿಗೆ ಅರ್ಹತೆ ಪಡೆದ ದಿನಾಂಕದಿಂದ ಉದ್ಯೋಗಾಧಿಕಾರಿ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ವಿಧಿಸಲಾದ ಎಲ್ಲಾ ಷರತ್ತುಗಳನ್ನು ಮತ್ತು ಆಯಾ ದಿನಾಂಕಗಳಲ್ಲಿ ಮುಂಬಡ್ತಿಗೆ ಲಭ್ಯವಿದ್ದ ಖಾಲಿ ಹುದ್ದೆಗಳನ್ನು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಉದ್ಯೋಗಾಧಿಕಾರಿಗಳಾಗಿ ಕಾರ್ಯ– ನಿರ್ವಹಿಸುತ್ತಿದ್ದ/ನಿರ್ವಹಿಸುತ್ತಿರುವ 09 ಸಹಾಯಕ ಉದ್ಯೋಗಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಮುಂಬಡ್ತಿ ಮತ್ತು ವಿಶ್ರಾಂತಿ ವೇತನ ಕ್ರಮಬದ್ಧಗೊಳಿಸುವಿಕೆ) ನಿಯಮಾವಳಿ 1978ರ ನಿಯಮ 2(3)ರನ್ವಯ ಉದ್ಯೋಗಾಧಿಕಾರಿಯ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿಗೆ ಪರಿಗಣಿಸುವಂತೆ ಕೋರಿರುತ್ತಾರೆ.

ಈ ಕುರಿತು ಸಮಗ್ರ ಪ್ರಸ್ತಾವನೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಗಾಗಿ ಕಳುಹಿಸಲಾಗಿತ್ತು, ಮೇಲಿನ ಕ್ರಮ ಸಂಖ್ಯೆ: (7) ರಲ್ಲಿ ಓದಲಾದ ಪತ್ರದಲ್ಲಿ ಆಯೋಗವು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಉದ್ಯೋಗಾಧಿಕಾರಿಯಾಗಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ/ನಿರ್ವಹಿಸುತ್ತಿರುವ 09 ಸಹಾಯಕ ಉದ್ಯೋಗಾಧಿಕಾರಿಗಳಿಗೆ, ಉದ್ಯೋಗಾಧಿಕಾರಿ ಹುದ್ದೆಗೆ ಮುಂಬಡ್ತಿಗೆ ಅರ್ಹತೆ ಪಡೆದ ದಿನಾಂಕದಿಂದ ಪೂರ್ವಾನ್ವಯವಾಗಿ ಸದರಿ ಉದ್ಯೋಗಾಧಿಕಾರಿಯ ಹುದ್ದೆಗೆ ಮುಂಬಡ್ತಿ ನೀಡುವಂತೆ ಸಹಮತಿ ನೀಡಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ ಕಾಇ 12 ಇಟಿಎಕ್ಸ್ 2006 ಬೆಂಗಳೂರು ದಿನಾಂಕ: 05ನೇ ಜೂನ್ 2008.**

ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಉದ್ಯೋಗಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದ/ನಿರ್ವಹಿಸುತ್ತಿರುವ ಈ ಕೆಳಕಂಡ 09 ಸಹಾಯಕ ಉದ್ಯೋಗಾಧಿಕಾರಿಗಳಿಗೆ ಅವರ ಹೆಸರುಗಳ ಮುಂದೆ ನಮೂದಿಸಿರುವಂತೆ, ಅವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿ ಉದ್ಯೋಗಾಧಿಕಾರಿಯ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿಪಿ) ನಿಯಮಾವಳಿ 1978ರ ನಿಯಮ 2(3)ರ ಅನುಸಾರ ಉದ್ಯೋಗಾಧಿಕಾರಿಯ ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿಗೆ ಪರಿಗಣಿಸಿ ಮುಂಬಡ್ತಿ ನೀಡಲಾಗಿದೆ, ಅದರಂತೆಯೇ ಪ್ರಸ್ತಾಪಿತ ಅಧಿಕಾರಿಗಳು ತತ್ಸಂಬಂಧ ಆರ್ಥಿಕ ಸೌಲಭ್ಯಗಳನ್ನೂ ಸಹ ಸದರಿ ದಿನಾಂಕದಿಂದ ಪಡೆಯಲು ಅರ್ಹರಿರುತ್ತಾರೆ. ಹಾಗೂ ಪ್ರಸ್ತಾಪಿತ ಅಧಿಕಾರಿಗಳು ಉದ್ಯೋಗಾಧಿಕಾರಿ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿಗೆ ಅರ್ಹತೆ ಪಡೆದ ದಿನಾಂಕದಿಂದ ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿಪಿ) ಅಧಿನಿಯಮ 1973ರ ನಿಯಮ 4(3)ರನ್ವಯ ಅವರಿಗೆ ಕೆಳಕಂಡ ದಿನಾಂಕದಿಂದ ಅನ್ವಯವಾಗುವಂತೆ ಈ ಮೂಲಕ ಕಾಲ್ಪನಿಕವಾಗಿ ವೇತನವನ್ನು ನಿಗದಿಪಡಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ. ಸಂ | ಅಧಿಕಾರಿಗಳ ಹೆಸರು | ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿಪಿ)ನಿಯಮಾವಳಿ 1978ರ ನಿಯಮ 2(3)ರನ್ವಯ ಉದ್ಯೋಗಾಧಿಕಾರಿ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿಗೆ ಪರಿಗಣಿಸಿದ ಅವಧಿ | ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿಪಿ)ನಿಯಮಾವಳಿ 1973ರ ಅಧಿನಿಯಮ 4(3)ರನ್ವಯ ಪೂರ್ವಾನ್ವಯ ಮುಂಬಡ್ತಿಗೆ ಅರ್ಹತೆ ಪಡೆದ ದಿನಾಂಕ |
|---|---|---|---|
| 1 | ಶ್ರೀ.ಎಂ.ಬಿ.ನಂಜುಂಡಯ್ಯ | 10–02–1999 ರಿಂದ 30–04–2002ರವರೆಗೆ | 17–04–1986 |
| 2 | ಶ್ರೀ ಬಿ.ಈರಪ್ಪ | 14–01–1999 ರಿಂದ 15–01–2001ರವರೆಗೆ | 03–07–1988 |
| 3 | ಶ್ರೀ ಎಸ್.ಎಸ್.ಸೂರ್ಯವಂಶಿ | 15–02–1999 ರಿಂದ 31–01–2003ರವರೆಗೆ | 22–04–1994 |
| 4 | ಶ್ರೀ.ಪಿ.ಎಸ್.ಪೊಲೀಸ್ ಪಾಟೀಲ್ | 12–01–1999 ರಿಂದ 30–11–2003ರವರೆಗೆ | 28–04–1994 |

| | | | |
|---|---|---|---|
| 5 | ಶ್ರೀ ಎನ್.ಎಸ್.ರಾಮಯ್ಯ | 14–01–1999 ರಿಂದ 30–06–2003ರವರೆಗೆ | 30–07–1994 |
| 6 | ಶ್ರೀ ಕೆ.ವೆಂಕಟೇಶ್ | 19–01–1999 ರಿಂದ 28–02–2002ರವರೆಗೆ | 16–12–1996 |
| 7 | ಶ್ರೀ ವೈ.ಹೆಚ್.ಬಾರಕೇರ್ | 30–06–1997 ರಿಂದ ಅನ್ವಯವಾಗುವಂತೆ | 30–06–1997 |
| 8 | ಶ್ರೀ ಸಿ.ಗುರುಮೂರ್ತಿ | 02–07–1997 ರಿಂದ ಅನ್ವಯವಾಗುವಂತೆ | 02–07–1997 |
| 9 | ಶ್ರೀ ಎ.ಎಂ.ರುದ್ರಪ್ಪ | 01–09–1997 ರಿಂದ 14–06–2005ರವರೆಗೆ | 01–09–1997 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 264 ವೆಚ್ಚ–9/2007 ದಿನಾಂಕ: 10/05/2007 ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಮತ್ತು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 152 ಸಿಎನ್‌ಎಸ್ 07 ದಿನಾಂಕ: 29/01/2008ರ ಮೂಲಕ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ ಹಾಗೂ ಈ ಪೂರ್ವಾನ್ವಯ ಮುಂಬಡ್ತಿಯನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ನ್ಯಾಯಾಲಯದಲ್ಲಿ ಇದರ ಸಂಬಂಧ ಯಾವುದಾದರೂ ಪ್ರಕರಣವಿದ್ದಲ್ಲಿ ಆ ತೀರ್ಪಿಗೆ ಬದ್ಧವಾಗುವ ಷರತ್ತಿಗೊಳಪಟ್ಟು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 923

**ಅಬ್ದುಲ್ ರೆಹಮಾನ್**
ಪೀಠಾಧಿಕಾರಿ
ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ರೈತರ ಆತ್ಮಹತ್ಯೆಯ ಪರಿಶೀಲನಾ ಸಮಿತಿಯ ಕರ್ತವ್ಯಗಳ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಕೃತೋಇ/280/ಕೃಉಇ/2003 ದಿನಾಂಕ:18.7.2003
2 ಕೃಷಿ ಆಯುಕ್ತರ ಪತ್ರದ ಸಂಖ್ಯೆ:ಉಕೃನಿ/ಕೃನಿ/ತಾಂ–1/ರೈಆ/11/08–09 ದಿನಾಂಕ:28.6.2008 ಮತ್ತು 02.07.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳಿಗೆ ಸಂಬಂಧಿಸಿದಂತೆ ಪರಿಹಾರಧನ ನೀಡುವ ಬಗ್ಗೆ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೃಷಿ ಆಯುಕ್ತರು ಪ್ರಸ್ತಾಪಿಸಿ ರೈತರ ಆತ್ಮಹತ್ಯೆ ಪ್ರಕರಣಗಳ ವರದಿಗಳನ್ನು ಇತ್ಯರ್ಥಪಡಿಸುವಲ್ಲಿ ವಿಳಂಬವಾಗುತ್ತಿದ್ದು, ಮೇಲೆ ಓದಲಾದ ಸರ್ಕಾರಿ ಆದೇಶದ ಅನುಬಂಧ–1 ರಲ್ಲಿನ ಅಂಶ "2" ನ್ನು ಮಾರ್ಪಡಿಸಿ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲು ನಿರ್ಧರಿಸಲಾಗಿದೆ.

**ಸರ್ಕಾರಿ ಆದೇಶದ ಸಂಖ್ಯೆ ಕೃತೋಇ /59/ಕೃಉಇ/2008, ಬೆಂಗಳೂರು, ದಿನಾಂಕ:7ನೇ ಜುಲೈ 2008**

ಸರ್ಕಾರದ ಆದೇಶ ಸಂ. ಕೃತೋಇ/280/ಕೃಉಇ/2003 ದಿನಾಂಕ:18–7–2003 ರ ಅನುಬಂಧ–1 ರಲ್ಲಿನ "ಸಮಿತಿಯ ಕರ್ತವ್ಯಗಳು" ಅಂಶ (2) ರಲ್ಲಿ ರೈತನು ಆತ್ಮಹತ್ಯೆ ಮಾಡಿಕೊಂಡಿರುವನೆಂದು ಮಾಹಿತಿ ಬಂದ ತಕ್ಷಣ ಉಪ ವಿಭಾಗಾಧಿಕಾರಿಗಳು 24 ಗಂಟೆಗಳ ಒಳಗಾಗಿ ಆತ್ಮಹತ್ಯೆ ಮಾಡಿಕೊಂಡ ರೈತರ ನಿವಾಸಕ್ಕೆ ಭೇಟಿ ನೀಡಿ ವಿಚಾರಣೆ ಮಾಡತಕ್ಕದ್ದು" ಎಂದು ಮಾರ್ಪಡಿಸಿ, ತಿದ್ದುಪಡಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ ಸರ್ಕಾರದ ಆದೇಶ ಹಾಗೂ ಅನುಬಂಧ–1ರಲ್ಲಿನ ಉಳಿದ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1041

**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ :** 2008-09ನೇ ಸಾಲಿಗೆ ಕೇಂದ್ರ ಸರ್ಕಾರದ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮವನ್ನು ಮುಂದುವರಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿಪಿ 11 ಐಆರ್‌ಎಂ 82 ದಿ : 14.05.82
2. ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿಪಿ 66 ಬಿಜಿಎಸ್ 84 ದಿ : 12.06.87.
3. ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 14 ಜೈಅಯೋ 2005 ದಿ:15.07.2005.
4. ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 9 ಜೈಅಯೋ 2006 ದಿ:01.04.2006.
5. ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 8 ಜೈಅಯೋ 2007 ದಿನಾಂಕ 02.05.2008.

**ಪ್ರಸ್ತಾವನೆ :**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ರಾಜ್ಯಮಟ್ಟದಲ್ಲಿದ್ದ 2 ಕಾರ್ಯಕ್ರಮ ಮತ್ತು ಜಿಲ್ಲಾ ವಲಯದಡಿಯಲ್ಲಿದ್ದ ಒಂದು ಕಾರ್ಯಕ್ರಮವನ್ನು 2008-09ನೇ ಸಾಲಿಗೆ ಮುಂದುವರಿಸಲು ಸರ್ಕಾರ ತೀರ್ಮಾನಿಸಿದೆ. ಪ್ರಯುಕ್ತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 2 ಜೈಅಯೋ 2008, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮವನ್ನು ಮತ್ತು ಅನುಬಂಧ(1)ರಲ್ಲಿ ತಿಳಿಸಿರುವ ಸಿಬ್ಬಂದಿಯನ್ನು (ರಾಜ್ಯ ಕೋಶ) 2008-09ನೇ ಸಾಲಿಗೆ ಮುಂದುವರಿಸಿದೆ. ಯೋಜನೆಯ ಅನುಷ್ಠಾನವನ್ನು ಕಾಲಕಾಲಕ್ಕೆ ನೀಡಲಾದ ಆಡಳಿತಾತ್ಮಕ ಮಂಜೂರಾತಿಯಲ್ಲಿನ ಷರತ್ತು ಮತ್ತು ನಿಬಂಧನೆಗಳಂತೆ ನಿರ್ವಹಿಸತಕ್ಕದ್ದು.

ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮದಡಿ 2008-09ನೇ ಸಾಲಿನ ಆಯವ್ಯಯದಲ್ಲಿ ಕಾರ್ಯಕ್ರಮದ ಅನುಷ್ಠಾನಕ್ಕೆ ಲೆಕ್ಕ ಶೀರ್ಷಿಕೆ 2810-60-198-6-01 ರಡಿ ಕೇಂದ್ರ ಸರ್ಕಾರದ ಪಾಲು ಅಡಿಯಲ್ಲಿ ರೂ. 409.00 ಲಕ್ಷಗಳು ಮತ್ತು ರೂ.356.29 ಲಕ್ಷಗಳನ್ನು ರಾಜ್ಯ ಅನಿಲ ಯೋಜನೆಯಡಿ ಒದಗಿಸಲಾಗಿದೆ. ಅಲ್ಲದೇ ಸಿಬ್ಬಂದಿ ಹಾಗೂ ಆಡಳಿತಾತ್ಮಕ ವೆಚ್ಚಗಳಿಗಾಗಿ ಲೆಕ್ಕ ಶೀರ್ಷಿಕೆ 2810-01-001-0-02 ಯಡಿ ರೂ. 26.58 ಲಕ್ಷಗಳನ್ನು ಒದಗಿಸಿದೆ.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರು, ರವರ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ ಗ್ರಾಅಪ 170 ಪಿಬಿಎಸ್ 2008, ದಿನಾಂಕ 09.04.2008 ರಲ್ಲಿ ಪಡೆದು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಎನ್. ಮಂಜುಳ**

ನಿರ್ದೇಶಕರು (ಗ್ರಾಮೂಸೌ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ-1**

**ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 2 ಜೈಅಯೋ 2008, ಬೆಂಗಳೂರು, ದಿನಾಂಕ 23.04.2008.**

2008-09ನೇ ಸಾಲಿಗೆ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮದಡಿ ಮುಂದುವರಿಸಲಾದ ಹುದ್ದೆಗಳ ವಿವರ

| ಕ್ರ. ಸಂ. | ಮುಂದುವರಿಸಲಾದ ಹುದ್ದೆಗಳು | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| {ಎ : ರಾಜ್ಯ ಕೋಶ (ಕೇಂದ್ರ ಘಟಕ ಸಿಬ್ಬಂದಿ} | | | |
| 1 | ಉಪನಿರ್ದೇಶಕರು (ತಾಂತ್ರಿಕ) | 14050-25050 | ಒಂದು |
| 2 | ಉಪನಿರ್ದೇಶಕರು (ಜೈವಾನಿಲ) | 11400-21600 | ಒಂದು |
| 3 | ಲೆಕ್ಕ ಅಧೀಕ್ಷಕರು | 10800-20025 | ಒಂದು |
| 4 | ಶೀಘ್ರಲಿಪಿಗಾರರು | 7275-13350 ವಿ.ಭ. 110/- | ಒಂದು |
| 5 | ಪ್ರಥಮ ದರ್ಜೆ ಸಹಾಯಕರು | 7275-13350 | ಎರಡು |
| 6 | ಬೆರಳಚ್ಚುಗಾರರು | 5800-10500 ವಿ.ಭ. 90/- | ಒಂದು |
| 7 | ವಾಹನ ಚಾಲಕರು | 5800-10500 ವಿ.ಭ. 90/- | ಒಂದು |
| 8 | ಗ್ರೂಫ್ ಡಿ ನೌಕರರು | 4800-7275 | ಒಂದು |

{ಬಿ. ಜಿಲ್ಲಾ ಮಟ್ಟದ ಸಿಬ್ಬಂದಿ (7 ತೀವ್ರಗತಿ ಜಿಲ್ಲೆಗಳ ಸಿಬ್ಬಂದಿ) }

| ಕ್ರ. ಸಂ. | ಮುಂದುವರಿಸಲಾದ ಹುದ್ದೆಗಳು | ವೇತನ ಶ್ರೇಣಿ (ರೂ. ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಿರಿಯ ಅಭಿಯಂತರರು:ತಾಂತ್ರಿಕರು, (ಸಹಾಯಕ ಅಭಿಯಂತರರು), (ಧಾರವಾಡ, ಮಂಡ್ಯ, ಮೈಸೂರು, ಬೆಂಗಳೂರು(ಗ್ರಾ) ಮತ್ತು ತುಮಕೂರು ಈ ಐದು ತೀವ್ರಗತಿ ಜಿಲ್ಲೆಗಳು) | 8825–16000 (11400–21600) | ಐದು |
| 2 | ಪ್ರಥಮ ದರ್ಜೆ ಸಹಾಯಕರು, (ದಕ್ಷಿಣ ಕನ್ನಡ, ಬೆಳಗಾಂ, ಧಾರವಾಡ, ಮೈಸೂರು, ಗುಲ್ಬರ್ಗಾ, ಬೆಂಗಳೂರು (ಗ್ರಾ) ಮತ್ತು ತುಮಕೂರು – ಈ ಏಳು ತೀವ್ರಗತಿ ಜಿಲ್ಲೆಗಳು) | 7275–13350 | ಏಳು |
| 3 | ಜೈವಾನಿಲ ಮೇಲ್ವಿಚಾರಕರು (ದಕ್ಷಿಣ ಕನ್ನಡ, ಬೆಳಗಾಂ, ಧಾರವಾಡ, ಮೈಸೂರು, ಗುಲ್ಬರ್ಗಾ, ಬೆಂಗಳೂರು (ಗ್ರಾ) ಮತ್ತು ತುಮಕೂರು – ಈ ಏಳು ತೀವ್ರಗತಿ ಜಿಲ್ಲೆಗಳು) | 6250–12000 | ಏಳು |

**ಡಾ: ಎನ್. ಮಂಜುಳ**
ಪಿ.ಆರ್.709
ನಿರ್ದೇಶಕರು (ಗ್ರಾಮೂಸೌ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ :** 2008–09ನೇ ಸಾಲಿಗೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವನ್ನು ಮುಂದುವರಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 18 ಗ್ರಾಇಂಕಾ 2004, ದಿ : 17.06.2004 ಮತ್ತು 20.07.2004.
2. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 24 ಗ್ರಾಇಂಕಾ 2005, ದಿ : 15.07.2005.
3. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 13 ಗ್ರಾಇಂಕಾ 2006, ದಿ : 01.04.2006.
4. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 42 ಗ್ರಾಇಂಕಾ 2007, ದಿ : 02.05.2007.

**ಪ್ರಸ್ತಾವನೆ :**

ರಾಜ್ಯ ಯೋಜನೆಯಾದ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ರಾಜ್ಯ ಮಟ್ಟದಲ್ಲಿದ್ದ 2 ಕಾರ್ಯಕ್ರಮ ಮತ್ತು ಜಿಲ್ಲಾ ವಲಯದಡಿಯಲ್ಲಿದ್ದ ಒಂದು ಕಾರ್ಯಕ್ರಮವನ್ನು 2008–09ನೇ ಸಾಲಿಗೆ ಮುಂದುವರಿಸಲು ಸರ್ಕಾರ ತೀರ್ಮಾನಿಸಿದೆ. ಪ್ರಯುಕ್ತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ :4: ಗ್ರಾಇಂಕಾ 2008, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2008**.

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದಡಿ 2008–09ನೇ ಸಾಲಿಗೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮ ಹಾಗೂ ರಾಜ್ಯ ಕೋಶ ಮತ್ತು ಜಿಲ್ಲಾ ವಲಯದಡಿಯಲ್ಲಿನ ಎಲ್ಲಾ ಹುದ್ದೆಗಳನ್ನು ಅನುಬಂಧ–1ರಲ್ಲಿ ವಿವರಿಸಿರುವಂತೆ ಮುಂದುವರಿಸಿದೆ. ಯೋಜನೆಯ ಅನುಷ್ಠಾನವನ್ನು ಕಾಲಕಾಲಕ್ಕೆ ನೀಡಲಾದ ಆಡಳಿತಾತ್ಮಕ ಮಂಜೂರಾತಿಯಲ್ಲಿನ ಷರತ್ತು ಮತ್ತು ನಿಬಂಧನೆಗಳಂತೆ ನಿರ್ವಹಿಸತಕ್ಕದ್ದು.

ವಿವಿಧ ಲೆಕ್ಕಶೀರ್ಷಿಕೆಯಡಿ ಒದಗಿಸಿರುವ ಅನುದಾನದ ವಿವರ

| | | |
|---|---|---|
| 2501–04–105–0–01 (ಯೋಜನಾ ಅನುಷ್ಠಾನ) | ರೂ.61.11 ಲಕ್ಷಗಳು | ಅನುಬಂಧ–1ಅ ದಲ್ಲಿ ತೋರಿಸಿದ ಸಿಬ್ಬಂದಿ ವೆಚ್ಚಗಳಿಗಾಗಿ |
| 2501–04–105–0–02–059 | ರೂ. 40.00 ಲಕ್ಷಗಳು | ತರಬೇತಿ ಕೇಂದ್ರ (MGIRED) |
| 2501–01–198–1–01 | ರೂ. 283.65 ಲಕ್ಷಗಳು | ಬ್ಲಾಕ್ ಅನುದಾನ |

2. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ ಗ್ರಾಅಪ 169 ಪಿಬಿಎಸ್ 2008 ದಿನಾಂಕ 09.04.2008 ರಲ್ಲಿ ಪಡೆಯಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ: ಎನ್. ಮಂಜುಳ**
ನಿರ್ದೇಶಕರು (ಗ್ರಾಮೂಸೌ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ–1**

**ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 4 ಗ್ರಾಇಂಕಾ 2008, ಬೆಂಗಳೂರು, ದಿನಾಂಕ 23ನೇ ಏಪ್ರಿಲ್ 2008.**

**ಅ). ರಾಜ್ಯ ಘಟಕದ ಹುದ್ದೆಗಳು :**

| ಕ್ರ. ಸಂ. | ಮುಂದುವರಿಸಲಾದ ಹುದ್ದೆಗಳು | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಯೋಜನಾ ನಿರ್ದೇಶಕರು | 18150–26925 | ಒಂದು |
| 2 | ಲೆಕ್ಕ ಅಧೀಕ್ಷಕರು | 10800–20025 | ಒಂದು |
| 3 | ಶೀಘ್ರಲಿಪಿಗಾರರು | 7275–13350 ವಿ.ಭ.110/– | ಒಂದು |
| 4 | ಪ್ರಥಮ ದರ್ಜೆ ಸಹಾಯಕರು | 7275–13350 | ಒಂದು |
| 5 | ಬೆರಳಚ್ಚುಗಾರರು | 5800–10500 ವಿ.ಭ. 90/– | ಎರಡು |
| 6 | ಗ್ರೂಫ್ ಡಿ ನೌಕರರು | 5200 3200 | ಒಂದು |

**ಅ). ಜಿಲ್ಲಾವಾರು ಹುದ್ದೆಗಳು :**

| ಕ್ರ. ಸಂ. | ಮುಂದುವರಿಸಲಾದ ಹುದ್ದೆಗಳು | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಯೋಜನಾ ಅಭಿಯಂತರರು | 8825–16000 | ಒಂದು |
| 2 | ವಾಹನ ಚಾಲಕ (ಬೆಂಗಳೂರು ಉತ್ತರ ತಾ:ಗೆ ಮಾತ್ರ) | 5800–10500 ವಿ.ಭ. 90/– | ಒಂದು |

**ಡಾ: ಎನ್. ಮಂಜುಳ**
ಪಿ.ಆರ್.710
ನಿರ್ದೇಶಕರು (ಗ್ರಾಮೂಸೌ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಡಿ.ಬಿ.ನಾಯಕ್, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಆಯುಕ್ತರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಹಾಲಿ ಹೆಚ್ಚುವರಿ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ಇವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂ:ಸಿಆಸುಇ 344 ಎಸ್ಇಎನ್ 06 (ಸಿಆಸುಇ 121 ಕೆಇವಿ 07) ದಿ:06–12–2007.
2. ಶ್ರೀ. ಡಿ.ಬಿ.ನಾಯಕ್, ಕೆ.ಎ.ಎಸ್(ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಆಯುಕ್ತರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ ಇವರ ದಿ:10–01–08ರ ಉತ್ತರ.

**ಪ್ರಸ್ತಾವನೆ :**

ಶ್ರೀ ಡಿ.ಬಿ.ನಾಯಕ್, ಕೆ.ಎ.ಎಸ್(ಸೂಪರ್ ಟೈಂ ಸ್ಕೇಲ್) ಅಧಿಕಾರಿರವರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಬಸ್‌ಗಳ ತಂಗುದಾಣಗಳ ನಿರ್ಮಾಣ ಮಾಡಿದ ಗುತ್ತಿಗೆದಾರರನ್ನು ಕಪ್ಪುಪಟ್ಟಿಗೆ ಸೇರಿಸಲು ಹಾಗೂ ಅಭಿಯಂತರರ ವಿರುದ್ಧ ಕ್ರಮ ಕೈಗೊಳ್ಳುವಂತೆ ನೀಡಿರುವ ಸೂಚನೆಗಳನ್ನು ಉಲ್ಲಂಘಿಸಿರುವ, ಪ್ರಾಧಿಕಾರ ಜಿ ಕೆಟಗರಿಯಡಿ ಹಾಗೂ ಬಿಡಿ ನಿವೇಶನಗಳನ್ನು ಹಂಚಿಕೆ ಮಾಡಿದ್ದು ಸದರಿ ನಿವೇಶನಗಳನ್ನು ಹಂಚಿಕೆದಾರರಿಗೆ ಹಸ್ತಾಂತರಿಸುವ ಹಂಚಿಕೆ ಪತ್ರ ನೀಡದೆ, ಇದಕ್ಕೆ ಸಂಬಂಧಿಸಿದ ಕಡತವನ್ನು ಸಲ್ಲಿಸಲು ವಿಳಂಬ ಮಾಡಿರುವ ಭೂಕಬಳಿಕೆ ಉಲ್ಲಂಘನೆಯಾದ 10 ಪ್ರಕರಣಗಳ ಮೇಲೆ ಸೂಕ್ತ ಕ್ರಮ ಜರುಗಿಸದೇಇರುವ ಪ್ರಾಧಿಕಾರದ ವಿವಿಧ ಬಡಾವಣೆ ಅಭಿವೃದ್ಧಿ ಕಾಮಗಾರಿಗಳನ್ನು ಪ್ರಾಧಿಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ಪಡೆಯದೇ ನಿರ್ವಹಿಸಿರುವ ಇತ್ಯಾದಿ ಆರೋಪಗಳ ಕುರಿತು ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆಗೆ ಸಂಬಂಧಿಸಿದಂತೆ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ:16–12–07ರಲ್ಲಿ ನೋಟಿಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಾಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿ:10–01–03ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ಸತ್ಯಾಸತ್ಯಾತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂ:ಸಿಆಸುಇ 121 ಆಇವಿ 2007, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಡಿ.ಬಿ.ನಾಯಕ್, ಕೆ.ಎ.ಎಸ್(ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಿಂದಿನ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾಂ ಹಾಲಿ ಹೆಚ್ಚುವರಿ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ರವರು ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ಪ್ರಾದೇಶಿಕ ಆಯುಕ್ತರು, ಬೆಳಗಾಂ ವಿಭಾಗ, ಬೆಳಗಾಂ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಳಗಾಂ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಬೆಳಗಾಂ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು ಅತಿ ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.711

**ಹೆಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

**ಇಂಧನ ಸಚಿವಾಲಯ**

**ವಿಷಯ:** ಮೆ: ಮೃಜಾರ ಪವರ್ ಪ್ಲಾಂಟ್ ಕಂಪನಿಯವರಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅಗರದಹಳ್ಳಿ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಇಂಇ 311 ಎನ್‌ಸಿಇ 2002 ದಿನಾಂಕ:30.4.2003.
2) ಸರ್ಕಾರಿ ಆದೇಶ ಸಂಖ್ಯೆ : ಇಂಇ 405 ಎನ್‌ಸಿಇ 2004 ದಿನಾಂಕ:10.12.2004.
3) ಸರ್ಕಾರಿ ಆದೇಶ ಸಂಖ್ಯೆ : ಇಂಇ 405 ಎನ್‌ಸಿಇ 2004 ದಿನಾಂಕ:17.2.2005.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/06/ಅಗರದಹಳ್ಳಿ/2007/455 ದಿನಾಂಕ:17.3.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ: ಮೃಜಾರ ಪವರ್ ಪ್ಲಾಂಟ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲೂಕಿನ ಅಗರದಹಳ್ಳಿ ಬಳಿ ಅನ್ವೇರಿ ಬ್ರಾಂಚ್ ಕೆನಾಲ್ ಹಳ್ಳಕೆ ಅಡ್ಡಲಾಗಿ 0.25 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಮೆ: ಮೃಜಾರ ಪವರ್ ಪ್ಲಾಂಟ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲೂಕಿನ ಅಗರದಹಳ್ಳಿ ಬಳಿ ಅನ್ವೇರಿ ಬ್ರಾಂಚ್ ಕೆನಾಲ್ ಹಳ್ಳಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾದ 0.25 ಮೆಗಾ ವ್ಯಾಟ್ ಸಾಮರ್ಥ್ಯದ ಅಗರದಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 0.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲದ ಕ್ರಮಾಂಕ (3) ರ ಆದೇಶದಲ್ಲಿ ಮೆ: ಮೃಜಾರ ಪವರ್ ಪ್ಲಾಂಟ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲೂಕಿನ ಅಗರದಹಳ್ಳಿ ಬಳಿ ಅನ್ವೇರಿ ಬ್ರಾಂಚ್ ಕೆನಾಲ್ ಹಳ್ಳಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾದ 0.50 ಮೆಗಾ ವ್ಯಾಟ್ ಸಾಮರ್ಥ್ಯದ ಅಗರದಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಮೃಜಾರ ಪವರ್ ಪ್ಲಾಂಟ್ ಕಂಪನಿಯ ಯೋಜನಾ ಕಾಮಗಾರಿ ಕೆಲಸವು ಮಳೆಯಿಂದಾಗಿ ವಿಳಂಬವಾಗಿರುವುದರಿಂದ ಯೋಜನೆಯನ್ನು ಸಕಾಲದಲ್ಲಿ ಅನುಷ್ಠಾನ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಕಾಲಾವಕಾಶವನ್ನು ದಿನಾಂಕ:18.3.2008 ರಿಂದ ಮುಂದಿನ 18 ತಿಂಗಳುಗಳ ಅವಧಿಗೆ ವಿಸ್ತರಿಸಲು ಶಿಫಾರಸು ಮಾಡಿರುತ್ತಾರೆ.

ಮೇಲಿನ ಶಿಫಾರಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 127 ಎನ್‌ಸಿಇ 2008, ಬೆಂಗಳೂರು ದಿನಾಂಕ 10ನೇ ಏಪ್ರಿಲ್, 2008**

ಸರ್ಕಾರವು ಮೆ: ಮೃಜಾರ ಪವರ್ ಪ್ಲಾಂಟ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲೂಕಿನ ಅಗರದಹಳ್ಳಿ ಬಳಿ ಅನ್ವೇರಿ ಬ್ರಾಂಚ್ ಕೆನಾಲ್ ಹಳ್ಳಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅಗರದಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ:18.3.2008 ರಿಂದ ಮುಂದಿನ 18 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥವತ್ತಾಗಿ ಮುಂದುವರೆಯುತ್ತವೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. ನಂ. 721

## ಸಹಕಾರ ಸಚಿವಾಲಯ

**ವಿಷಯ:** ದಿ ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಹಾವೇರಿ, ಇದರ 2006–07ನೇ ಸಾಲಿನ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ದಿನಾಂಕ 12–3–2008ರ ಡಿಎಸ್‌ಕೆ/ಇಎಸ್‌ಟಿಎಸ್/ಜಿಬಿಎಂ/90/07–08 ಸಂಖ್ಯೆಯ ಪತ್ರ.

**ಪ್ರಸ್ತಾವನೆ:**

ದಿ ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಸಂಗೂರು, ಹಾವೇರಿ, ಇದರ 2006–07ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ದಿನಾಂಕ 31–03–2008ರೊಳಗಾಗಿ ನಡೆಸಲು ಆದೇಶ ಹೊರಡಿಸಲಾಗಿತ್ತೆಂದೂ, ಕಾರ್ಖಾನೆಯನ್ನು 2007–08ನೇ ಸಾಲಿನಿಂದ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಿರುವುದರಿಂದ ಸದರಿ ಗುತ್ತಿಗೆಗೆ ಮಂಜೂರಾತಿ ನೀಡಲು ದಿನಾಂಕ 30–1–2008ರಂದು ವಿಶೇಷ ಸರ್ವ ಸದಸ್ಯರ ಸಭೆ ನಡೆಸಲಾಗಿತ್ತೆಂದೂ, ಕಾರ್ಖಾನೆಯ ಗುತ್ತಿಗೆಯ ವಿಧಿ–ವಿಧಾನಗಳನ್ನು ಪೂರೈಸುವುದು ಹಾಗೂ 2007–08ನೇ ಸಾಲಿನ ಕಬ್ಬು ನುರಿಸುವ ಹಂಗಾಮನ್ನು ಶೀಘ್ರದಲ್ಲಿ ಪ್ರಾರಂಭ ಮಾಡಬೇಕಾಗಿದ್ದರಿಂದ ಪುನಃ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಕಾಲಾವಕಾಶಬೇಕೆಂದೂ, ಈ ಕಾರಣಗಳಿಂದಾಗಿ 2006–07ನೇ ಸಾಲಿನ ಸರ್ವ ಸದಸ್ಯರ ಮಹಾಸಭೆಯನ್ನು 2008ನೇ ಸೆಪ್ಟೆಂಬರ್ ಮಾಹೆಯ ಅಂತ್ಯದೊಳಗೆ ನಡೆಸಲು ಅನುಮತಿ ಕೋರಿ ಸಕ್ಕರೆ ನಿರ್ದೇಶಕರು ತಮ್ಮ ದಿನಾಂಕ 12.3.2008ರ ಪತ್ರದ ಮೂಲಕ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 32 ಸಸಕಾ 2008, ಬೆಂಗಳೂರು ದಿನಾಂಕ 15ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ, ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ದಿ ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಸಂಗೂರು, ಹಾವೇರಿ ಜಿಲ್ಲೆ ಇದರ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು 30.9.2008ರೊಳಗೆ ನಡೆಸಲು ಅನುವಾಗುವಂತೆ ಈ ಸಂಘಕ್ಕೆ ಅಧಿನಿಯಮದ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟುಗಳೊಂದಿಗೆ ಅನ್ವಯವಾಗುತ್ತವೆ ಎಂದು ಆದೇಶಿಸುತ್ತದೆ, ಎಂದರೆ–

27ರ ಪ್ರಕರಣ

ಪ್ರಕರಣದ 27(1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಟು ದಿನಾಂಕ 30–9–2008 ರವರೆಗೆ ಜಾರಿಯಲ್ಲಿದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್. ನಂ.717

## ಶಿಕ್ಷಣ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ (ಪ್ರಾಥಮಿಕ ಹಾಗೂ ಪ್ರೌಢ) ಉಪ ಕಾರ್ಯದರ್ಶಿಯವರಿಗೆ ಅಧಿಕಾರವನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 114 ವಿವಿಧ 90, ದಿನಾಂಕ:18–11–1995
2) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಸಿಎ 12 ಎಆರ್‌ಡಿ 2007, ದಿನಾಂಕ 04–12–2007
3) ಸರ್ಕಾರದ ಆದೇಶ ಸಂಖ್ಯೆ:ಇಡಿ 13 ವಿವಿಧ 2008, ದಿನಾಂಕ 15–04–2008

**ಪ್ರಸ್ತಾವನೆ:**

ದಿನಾಂಕ 18–11–1995 ರ ಅಧಿಸೂಚನೆ ಸಂಖ್ಯೆ ಇಡಿ 114 ವಿವಿಧ 90 ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿ ಆದೇಶ ಹೊರಡಿಸಲಾಗಿದೆ.

ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಇಲಾಖೆಗಳ ಅಧಿಕಾರಿಗಳ ಸಂಖ್ಯೆ ಹೆಚ್ಚಿದ್ದು, ಅವರ ಸಂಬಂಧ ಬಹಳಷ್ಟು ಇಲಾಖಾ ವಿಚಾರಣೆ ಪ್ರಕರಣಗಳು ಶಿಕ್ಷಣ ಇಲಾಖೆಯಲ್ಲಿ ಬಾಕಿ ಇರುವುದರಿಂದ, ಕಾಲಕಾಲಕ್ಕೆ

ಶೀಘ್ರ ವಿಲೇವಾರಿ ಮಾಡುವ ದೃಷ್ಟಿಯಿಂದ ಓದಲಾದ ಸರ್ಕಾರದ "ಆದೇಶ ಸಂಖ್ಯೆ:ಇಡಿ 13 ವಿವಿಧ 2008, ದಿನಾಂಕ 15–04–2008ರಲ್ಲಿ ನಿರ್ದಿಷ್ಠ ಹಂತದವರೆಗಿನ ದಂಡನೆ ವಿಧಿಸುವ ನಿರ್ಣಯ ಕೈಗೊಳ್ಳಲು ಇಲಾಖಾ ಕಾರ್ಯದರ್ಶಿಯವರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮುಂದುವರೆದು, ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಸುಮಾರು 1,71,473 ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಹಾಗೂ 16,031 ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಕರು ಕೆಲಸ ಮಾಡುತ್ತಿದ್ದು, ಇವರುಗಳಲ್ಲಿ ಬಹಳಷ್ಟು ಶಿಕ್ಷಕರು ಬಿ.ಇಡಿ. ಪದವಿಯನ್ನು ಉನ್ನತ ವ್ಯಾಸಂಗವನ್ನಾಗಿ ಮಾಡಲು ಅರ್ಜಿಗಳನ್ನು ಸಲ್ಲಿಸುತ್ತಿದ್ದು, ಈ ಸಂಬಂಧ ಬಹಳಷ್ಟು ಅರ್ಜಿಗಳು ವ್ಯಾಸಂಗವನ್ನಾಗಿ ಮಾಡಲು ಅರ್ಜಿಗಳನ್ನು ಸಲ್ಲಿಸುತ್ತಿದ್ದು, ಈ ಸಂಬಂಧ ಬಹಳಷ್ಟು ಅರ್ಜಿಗಳು ಇಲಖಾ ಅಧಿಕಾರಿಗಳ ಮೂಲಕ ಶಿಫಾರಸ್ಸಿನೊಂದಿಗೆ ಶಿಕ್ಷಣ ಇಲಾಖೆಯಲ್ಲಿ ಸ್ವೀಕೃತವಾಗಿರುತ್ತವೆ/ಸ್ವೀಕೃತವಾಗುತ್ತವೆ. ಇಂತಹ ಪ್ರಸ್ತಾವನೆಗಳನ್ನು ಪರಿಶೀಲಿಸಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಉನ್ನತ ವ್ಯಾಸಂಗ ಮಾಡಲು ಅನುಮತಿ ನೀಡಲಾಗುತ್ತಿದೆ. ಹಾಗಾಗಿ ಈ ಪ್ರಕ್ರಿಯೆಯಲ್ಲಿ ಬಹಳಷ್ಟು ಕಾಲ ಹಿಡಿಯುತ್ತದೆ. ಇಂತಹ ಪ್ರಕರಣಗಳನ್ನು ಶೀಘ್ರ ವಿಲೇವಾರಿ ಮಾಡುವ ಸಲುವಾಗಿ ಶಿಕ್ಷಣ ಇಲಾಖೆಯ (ಪ್ರಾಥಮಿಕ ಹಾಗೂ ಪ್ರೌಢ) ಉಪ ಕಾರ್ಯದರ್ಶಿಯವರಿಗೆ ಈ ವಿಷಯದಲ್ಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿ ಆರ್ಥಿಕ ಇಲಾಖೆಗೆ ಕಳುಹಿಸಿ, ಸಹಮತಿ ಪಡೆದು, ಅವರ ಹಂತದಲ್ಲಿಯೇ ತೀರ್ಮಾನಿಸಿ ಅನುಮತಿ ನೀಡಲು ಅಧಿಕಾರ ಪ್ರತ್ಯಾಯೋಜಿಸುವುದು ಸೂಕ್ತವೆಂದು ಭಾವಿಸಲಾಗಿದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 133 ಇಎಸ್‌ಡಬ್ಲ್ಯೂ 2008, ಬೆಂಗಳೂರು ದಿನಾಂಕ 19ನೇ ಏಪ್ರಿಲ್ 2008**

ಸರ್ಕಾರದ ಆದೇಶ ಸಂಖ್ಯೆ:ಇಡಿ 114 ವಿವಿಧ 90, ದಿನಾಂಕ 18–11–1995 ಮತ್ತು ಸರ್ಕಾರದ ಆದೇಶ ಸಂಖ್ಯೆ:ಇಡಿ 13 ವಿವಿಧ 2008, ದಿನಾಂಕ 15–03–2008ನ್ನು ಮುಂದುವರೆಸುತ್ತಾ, ಅಧಿಸೂಚನೆ ಸಂಖ್ಯೆ:ಡಿಸಿಎ 12 ಏಆರ್‌ಡಿ 2007, ದಿನಾಂಕ 04–12–2007 ರಲ್ಲಿ ಹೊರಡಿಸಿರುವ ಕರ್ನಾಟಕ ಸರ್ಕಾರದ ವ್ಯವಹಾರಗಳ ನಿಯಮ(11), 2007ರ ನಿಯಮ 5ರ 2ನೇ ಪರಂತುಕ (ಪ್ರಾವಿಸೋ)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಉಪ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ) ರವರಿಗೆ ಈ ಕೆಳಕಂಡ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ:

> ಆರ್ಥಿಕ ಇಲಾಖೆಗೆ ಪ್ರಸ್ತಾವನೆಗಳು ಕಳುಹಿಸಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ, ಬಿ.ಇಡಿ ಅಥವಾ ಇತರೆ ಉನ್ನತ ಶಿಕ್ಷಣ ವ್ಯಾಸಂಗ ಮಾಡಲು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಹಾಗೂ ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಅನುಮತಿ ನೀಡುವುದು.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 724

**ಎಂ. ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–ಗ್ರಂಥಾಲಯ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ಎನ್.ಲಕ್ಷ್ಮಿನರಸಿಂಹಯ್ಯ, ಪಿ.ಎಸ್.ಐ.(ನಿ) ಮಿಡಿಗೇಶಿ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ:8:53:2002-03 ದಿನಾಂಕ:22-12-2004
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03-05-2005
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ:8:53:2002-03, ದಿನಾಂಕ:09-06-2006
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC140:CNS 2006 ದಿನಾಂಕ: 02-04-2008

**ಪ್ರಸ್ತಾವನೆ:**

ಶ್ರೀ.ಎನ್.ಲಕ್ಷ್ಮಿನರಸಿಂಹಯ್ಯ, ಪಿ.ಎಸ್.ಐ.(ನಿ) ಮಿಡಿಗೇಶಿ ಪೊಲೀಸ್ ಠಾಣೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

1) ``29-09-2002 ರಂದು ಮೃತ ವಸಂತ ಕುಮಾರನನ್ನು ಹೊಸ ಬಡಾವಣೆ ಪೊಲೀಸ್ ಠಾಣೆಗೆ ಅನಧಿಕೃತವಾಗಿ ಕರೆದುಕೊಂಡು ಬಂದು ಸತ್ಯವನ್ನು ಬದಿಗೊತ್ತಿ, ದಿ:04-10-02 ರಂದು ಠಾಣೆಗೆ ಕರೆದುಕೊಂಡು ಬಂದಿರುವ ಹಾಗೆ ಠಾಣೆ ದಿನಚರಿಯಲ್ಲಿ ಸುಳ್ಳು ಬರೆದು, ಕರ್ತವ್ಯದಲ್ಲಿ ಬೇಜವಾಬ್ದಾರಿತನ ತೋರಿಸಿರುತ್ತೀರಿ``.

2) ``29-09-2002 ರಂದು ಮೃತ ವಸಂತ ಕುಮಾರನನ್ನು ಠಾಣೆಗೆ ಕರೆದುಕೊಂಡು ಬಂದಿದ್ದರೂ ದಿ:29-09-2002 ರಿಂದ 04-10-2002 ರವರೆವಿಗೆ ತಮ್ಮ ಠಾಣೆಯ ಲಾಕಪ್‌ನಲ್ಲಿ ಆಗಲೀ ಅಥವಾ ಪೊಲೀಸ್ ಠಾಣೆಯಲ್ಲಿ ಆಗಲೀ ಯಾರೂ ಇಲ್ಲವೆಂದು ತುಮಕೂರು ನಿಯಂತ್ರಣ ಕೊಠಡಿಗೆ ಸುಳ್ಳು ವರದಿಯನ್ನು ನೀಡಿ ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ಕರ್ತವ್ಯ ನಿರ್ಲಕ್ಷ್ಯತೆ ತೋರಿಸಿರುತ್ತೀರಿ.``

3) ``ನಿಮಗೆ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆಯವರು ಬಂಧನ ಮತ್ತು ಅಭಿರಕ್ಷೆಯ ಬಗ್ಗೆ ನಿಯಮಗಳು ಜರೂರು ಜ್ಞಾಪನಾ ಪತ್ರ ಹೊರಡಿಸಿದ್ದರೂ, ಅದನ್ನು ಉಲ್ಲಂಘಿಸಿ, ಕರ್ತವ್ಯದಲ್ಲಿ ಬೇಜವಾಬ್ದಾರಿತನ ಎಸಗಿರುತ್ತೀರಿ``.

4) ``ನೀವು ಠಾಣೆಯಲ್ಲಿ ಲಾಕಪ್‌ಗಾರ್ಡ್ ಸಿಬ್ಬಂದಿಯನ್ನು ನೇಮಕ ಮಾಡಿದ್ದರೆ ದಿ:04-10-2002 ರಂದು ವಸಂತಕುಮಾರ್ ಪೊಲೀಸ್ ಠಾಣೆಯ ಶೌಚಾಲಯದಲ್ಲಿ ಸಾಯುವುದನ್ನು ತಪ್ಪಿಸಬಹುದಾಗಿತ್ತು, ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನವೇ ಕಾರಣವಾಗಿರುತ್ತದೆ.``

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22-12-2004ರ ಆದೇಶದಲ್ಲಿ ಅರ್ಜಿದಾರರರಿಗೆ ನಿವೃತ್ತಿ ಹೊಂದುವವರೆಗೂ ಇವರ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಇಳಿಸಿ ನಂತರ ಶಿಕ್ಷೆಗೆ ಮೊದಲು ಪಡೆಯುತ್ತಿದ್ದ ವೇತನದಿಂದ ಮುಂದುವರೆಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಪಿ.ಎಸ್.ಐ. ಇವರು ಎಸಗಿರುವ ಆರೋಪದ ತೀವ್ರತೆಯನ್ನು ಪರಿಗಣಿಸಿದ್ದಲ್ಲಿ ಇವರ ವಿರುದ್ಧ ಶಿಸ್ತುಪ್ರಾಧಿಕಾರ ವಿಧಿಸಿರುವ ನಿವೃತ್ತಿ ಹೊಂದುವವರೆವಿಗೂ ವೇತನಶ್ರೇಣಿಯನ್ನು ಕನಿಷ್ಠ ಮಟ್ಟಕ್ಕೆ ಇಳಿಸಿ, ನಂತರ ಶಿಕ್ಷೆಗೆ ಮೊದಲು ಪಡೆಯುತ್ತಿದ್ದ ವೇತನದಿಂದ ಮುಂದುವರೆಸುವ ದಂಡನೆ ಸಮಂಜಸವಾಗಿದ್ದರೂ ಸಹ ಇದು ಕ.ನಾ.ಸೇ.ನಿಯಮಾವಳಿಯ ನಿಯಮ 59(1)(ಎ)ಕ್ಕೆ ವಿರುದ್ಧವಾಗುತ್ತದೆ ಎಂಬ ಅಂಶವನ್ನು ಪ್ರಧಾನ ಕಾರ್ಯದರ್ಶಿಯವರ ಗಮನಕ್ಕೆ ತರಲಾಯಿತು. ಆದರೂ ಇವರು ಎಸೆಗಿರುವ ಆರೋಪಗಳನ್ನು ಪರಿಗಣಿಸಿ ಇವರಿಗೆ ಸಮಂಜಸವಾದ ಶಿಕ್ಷೆ ವಿಧಿಸಬೇಕೆನ್ನುವ ಬಗ್ಗೆ ಪರಿಶೀಲಿಸಿ, ಕ.ನಾ.ಸೇ. ನಿಯಮಾವಳಿಯ ನಿಯಮ 59(1)(ಎ)ರ ಪ್ರಕಾರವಾಗಿ, ಇಂತಹ ದಂಡನೆಗಳನ್ನು ಶಾಶ್ವತವಾಗಿ ವಿಧಿಸಲು ಬರುವುದಿಲ್ಲ. ಶಿಕ್ಷೆಯ ಅವಧಿಯನ್ನು ನಿಗದಿಪಡಿಸಬೇಕಾಗುತ್ತದೆ. ಆದ್ದರಿಂದ ಇವರು ಎಸಗಿರುವ ತೀವ್ರತರ ಆರೋಪಗಳನ್ನು ಪರಿಗಣಿಸಿ ಮತ್ತು ಇವರು ನಿವೃತ್ತಿ ಹೊಂದಿರುವುದರಿಂದ, ಇವರ ಪುನರ್ ಪರಿಶೀಲನಾ ಮೇಲ್ಮನವಿಯನ್ನು ಪರಿಶೀಲಿಸಿ, ಇವರ ವೇತನವನ್ನು ದಿ:22-12-2004 ರಿಂದ ಒಂದು ವರ್ಷದ ಅವಧಿಗೆ ಕನಿಷ್ಟ ವೇತನಕ್ಕೆ ಇಳಿಸಿ, ದಿ:22-12-2005ರ ನಂತರ ದಂಡನೆ ವಿಧಿಸಿದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ನಿಗದಿಪಡಿಸಿ, ಪಿಂಚಣಿ ಸೌಲಭ್ಯ ಪಡೆಯಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 320 ಪೊಸಿಅ 2005 ಬೆಂಗಳೂರು, ದಿನಾಂಕ:24ನೇ ಏಪ್ರಿಲ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎನ್.ಲಕ್ಷ್ಮಿನರಸಿಂಹಯ್ಯ, ಪಿ.ಎಸ್.ಐ.(ನಿ) ಮಿಡಿಗೇಶಿ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಶ್ರೀ.ಎನ್.ಲಕ್ಷ್ಮಿನರಸಿಂಹಯ್ಯ, ಪಿ.ಎಸ್.ಐ.(ನಿ) ಮಿಡಿಗೇಶಿ ಪೊಲೀಸ್ ಠಾಣೆ, ಇವರಿಗೆ ದಿ:22-12-2004 ಒಂದು ವರ್ಷದ ಅವಧಿಗೆ ಅವರ ವೇತನ ಶ್ರೇಣೀಯ ಕನಿಷ್ಟ ಮಟ್ಟಕ್ಕೆ ವೇತನವನ್ನು ಇಳಿಸಿ, ಒಂದು ವರ್ಷದ ನಂತರ ಅಂದರೆ ದಿ:22-12-2005ರ ನಂತರ ದಂಡನೆ ವಿಧಿಸಿದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ನಿಗದಿಪಡಿಸಿ ದಿ:01-01-2006ಕ್ಕೆ ವಾರ್ಷಿಕ ವೇತನ ಬಡ್ತಿ ನೀಡಿ ದಿ:28-02-2006ಕ್ಕೆ ನಿವೃತ್ತಿ ಹೊಂದಿ ಪಿಂಚಣಿ ಸೌಲಭ್ಯವನ್ನು ಪಡೆಯಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ:ಪಿಎಸ್‌ಸಿ 140 ಸಿಎನ್‌ಎಸ್ 2006 ದಿ:02-04-2008 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 727

**ಆರ್. ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಕಾರ್ಯದರ್ಶಿಗಳು, ಕರ್ನಾಟಕ ಮಾಹಿತಿ ಆಯೋಗ ಇವರನ್ನು ಹಣ ಸೆಳೆಯುವ ಮತ್ತು ಬಡವಾಡೆ ಅಧಿಕಾರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:114:RTI:2005, ದಿ.25.08.2005

2) ಕಾರ್ಯದರ್ಶಿಗಳು, ಕರ್ನಾಟಕ ಮಾಹಿತಿ ಆಯೋಗ ಇವರ ಪತ್ರದ ಸಂಖ್ಯೆ:ಕಮಾಅ:KIC 08/ADM:2007, ದಿನಾಂಕ:30.08.2007.

3) ಮಹಾಲೇಖಪಾರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: TM/A/2007-08/988, ದಿನಾಂಕ:21.02.2008.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಅಧೀನ ಕಾರ್ಯದರ್ಶಿಗಳು, ಕರ್ನಾಟಕ ಮಾಹಿತಿ ಆಯೋಗ ಇವರನ್ನು ಆಯೋಗದಲ್ಲಿ ಹಣ ಸೆಳೆಯುವ ಮತ್ತು ಬಡವಾಡೆ ಅಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಮೇಲೆ ಓದಲಾಗಿರುವ (2) ರಲ್ಲಿನ ಪತ್ರದಲ್ಲಿ ಕಾರ್ಯದರ್ಶಿಗಳು, ಕರ್ನಾಟಕ ಮಾಹಿತಿ ಆಯೋಗ ಇವರು ಆಯೋಗದಲ್ಲಿನ ಅಧೀನ ಕಾರ್ಯದರ್ಶಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಿಸಿರುವುದನ್ನು ರದ್ದು ಮಾಡಿ, ಕಾರ್ಯದರ್ಶಿಗಳನ್ನು ಹಣ ಸೆಳೆಯುವ ಮತ್ತು ಬಡವಾಡೆ ಅಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲು ಕೋರಿದ್ದಾರೆ. ಮೇಲೆ ಓದಲಾದ (3) ರಲ್ಲಿನ ಪತ್ರದಲ್ಲಿ ಮಹಾಲೇಖಾಪಾಲರು, ಕರ್ನಾಟಕ, ಬೆಂಗಳೂರು ಇವರು ಕಾರ್ಯದರ್ಶಿಗಳಿಗೆ ಈ ಬಗ್ಗೆ Establishment Authorization ನೀಡುವ ಕುರಿತಂತೆ ಕರ್ನಾಟಕ ಮಾಹಿತಿ ಆಯೋಗದ ಕಾರ್ಯದರ್ಶಿಗಳನ್ನು, ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಜನಸ್ಪಂದನ ಕೋಶ) ಇವರು ಕಾರ್ಯದರ್ಶಿ, ಕರ್ನಾಟಕ ಮಾಹಿತಿ ಆಯೋಗ ಇವರನ್ನ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಿಸಬಹುದೆಂದು ತಿಳಿಸಿದ್ದಾರೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ;103: RTI:2007, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2008.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ:114:RTI:2005, ದಿನಾಂಕ:25.08.2005 ರಲ್ಲಿ ಅಧೀನ ಕಾರ್ಯದರ್ಶಿಗಳು, ಕರ್ನಾಟಕ ಮಾಹಿತಿ ಆಯೋಗ ಇವರನ್ನು ಕರ್ನಾಟಕ ಮಾಹಿತಿ ಆಯೋಗದ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿ, ಕರ್ನಾಟಕ ಮಾಹಿತಿ ಆಯೋಗದ ಕಾರ್ಯದರ್ಶಿ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ : ಆಇ 742 ಆನಿ 07, ದಿನಾಂಕ:11.07.2007ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 726

**ಬಿ. ಶಿವರುದ್ರಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಜನಸ್ಪಂದನ ಕೋಶ–ಮಾಹಿತಿ ಹಕ್ಕು)

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ವಿಷಯ :** ಶ್ರೀ ಹೆಚ್.ಎಸ್. ನಾಗರಾಳ, ಭೂದಾಖಲೆಗಳ ಉಪ ನಿರ್ದೇಶಕರು ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

ಸರ್ಕಾರದ ಆದೇಶ ಸಂ.ಕಂಇ 56 ಭೂದಾಸೇ(1) 2007 ದಿನಾಂಕ:25–08–2007ರ ಆದೇಶ ಭಾಗದ ಕಂಡಿಕೆ(ಅ)ರಲ್ಲಿನ 2ನೇ ಪಂಕ್ತಿಯಲ್ಲಿ ನಮೂದಾಗಿರುವ "ರೂ.9320"ಕ್ಕೆ ಬದಲಾಗಿ "ರೂ.9580" ಎಂದು 3ನೇ ಪಂಕ್ತಿಯಲ್ಲಿ ನಮೂದಾಗಿರುವ "ರೂ.8800"ಕ್ಕೆ ಬದಲಾಗಿ "ರೂ.9060" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 729

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಹರಿಶ್ಚಂದ್ರ, ಡಿ.ಎಸ್.ಪಿ., ಹಾಲಿ ಎ.ಎನ್.ಎಫ್., ಕಾರ್ಕಳ, ಹಿಂದೆ ಮಂಗಳೂರು ಉಪ ವಿಭಾಗ, ಶ್ರೀ ಎಚ್.ಎಸ್. ವೆಂಕಟೇಶ್ ಪ್ರಸನ್ನ, ಸಿಪಿಐ, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಶ್ರೀ ಎಂ.ಎನ್. ರವಿಶಂಕರ್, ಪಿಎಸ್.ಐ., ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ಇವರುಗಳ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:** 1) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ರವರ ಕಛೇರಿಯ ಪತ್ರ ಸಂಖ್ಯೆ: ಸಿಬಿ(5)15/2007–08 ದಿನಾಂಕ 23–01–2008.

**ಪ್ರಸ್ತಾವನೆ:**

ಶ್ರೀ ಹರಿಶ್ಚಂದ್ರ, ಡಿ.ಎಸ್.ಪಿ., ಹಾಲಿ ಎ.ಎನ್.ಎಫ್., ಕಾರ್ಕಳ, ಹಿಂದೆ ಮಂಗಳೂರು ಉಪ ವಿಭಾಗ, ಶ್ರೀ ಎಚ್.ಎಸ್. ವೆಂಕಟೇಶ್ ಪ್ರಸನ್ನ, ಸಿಪಿಐ, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಶ್ರೀ ಎಂ.ಎನ್. ರವಿಶಂಕರ್, ಪಿಎಸ್.ಐ., ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ಆದ ನೀವುಗಳು ಮಂಗಳೂರು ದಕ್ಷಿಣ ಪೊಲೀಸ ಠಾಣೆ ಮೊ.ಸಂ. 184/06 ಕಲಂ 498 (ಎ), 304 (ಬಿ) ಐಪಿಸಿ ಪ್ರಕರಣದ ತನಿಖೆಯಲ್ಲಿ ಕರ್ತವ್ಯ ಲೋಪವೆಸಗಿರುವುದು ಉಲ್ಲೇಖಿತ ಪತ್ರದಿಂದ ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ, ಸದರಿಯವರುಗಳ ವಿರುದ್ಧ ಕೆಎಸ್‌ಪಿ (ಡಿಪಿ) ನಿಯಮ 1965/89 ರ ನಿಯಮ 6 ರ ಉಪನಿಯಮ 2 & 8 ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಹೆಚ್ಚುವರಿ ಪೊಲೀಸ್ ಅಧೀಕ್ಷಕರು, ಮಂಗಳೂರು ಜಿಲ್ಲೆರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ ಕೆಎಸ್‌ಪಿ (ಡಿಪಿ) ನಿಯಮ 1965 ರ ನಿಯಮ 6 ಉಪ ನಿಯಮ (2) & 8 ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಸದರಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಹಾಗೂ ಸದರಿ ಇಲಾಖಾ ವಿಚಾರಣೆ ನಡೆಸಲು ಹೆಚ್ಚುವರಿ ಪೊಲೀಸ್ ಅಧೀಕ್ಷಕರು, ಮಂಗಳೂರು ಜಿಲ್ಲೆ ರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಒಇ 42 ಪೊಸಿಪ 2008, ಬೆಂಗಳೂರು ದಿನಾಂಕ 28ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಹರಿಶ್ಚಂದ್ರ, ಡಿ.ಎಸ್.ಪಿ., ಹಾಲಿ ಎ.ಎನ್.ಎಫ್., ಕಾರ್ಕಳ, ಹಿಂದೆ ಮಂಗಳೂರು ಉಪ ವಿಭಾಗ, ಶ್ರೀ ಎಚ್.ಎಸ್. ವೆಂಕಟೇಶ್ ಪ್ರಸನ್ನ, ಸಿಪಿಐ, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಶ್ರೀ ಎಂ.ಎನ್. ರವಿಶಂಕರ್, ಪಿಎಸ್.ಐ., ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ರವರುಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 1965 ರ ನಿಯಮ 6 ಮತ್ತು 8ರ ಅಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಇಲಾಖಾ ವಿಚಾರಣೆ ನಡೆಸಲು ಹೆಚ್ಚುವರಿ ಪೊಲೀಸ್ ಅಧೀಕ್ಷಕರು, ಮಂಗಳೂರು ಜಿಲ್ಲೆ ರವರನ್ನು ವಿಶೇಷ ಅಧಿಕಾರಹೊಂದಿದ ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ನಡೆಸಿ 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಸೂಚಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 715

**ಆರ್. ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಸಿ.ಎಂ.ಮಹದೇವಯ್ಯ, ಸಹಾಯಕ ನಿರ್ದೇಶಕರು, ರವರು ಸ್ವಇಚ್ಛಾ ನಿವೃತ್ತಿ ಕೋರಿರುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 18 ಪೊಸಿಲಿ 2006 ದಿನಾಂಕ 29-06-2006.

2) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ4/120/2006-07 ದಿನಾಂಕ 23-08-2007 ಮತ್ತು 18-12-2007.

3) ಶ್ರೀ ಸಿ.ಎಂ.ಮಹದೇವಯ್ಯ ಇವರ ಮನವಿ ದಿನಾಂಕ 10-05-2006, 08-06-2006 ಮತ್ತು 12-03-2008.

**ಪ್ರಸ್ತಾವನೆ:**

ಶ್ರೀ ಸಿ.ಎಂ.ಮಹದೇವಯ್ಯ, ಸಹಾಯಕ ನಿರ್ದೇಶಕರು (ರಾಸಾಯನಿಕ ವಿಭಾಗ) ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಇವರು ದಿನಾಂಕ 10-05-2006 ರಂದು ಸ್ವಯಂ ಇಚ್ಛೆಯಿಂದ ನಿವೃತ್ತಿ ಹೊಂದಲು ಕೆ.ಸಿ.ಎಸ್.ಆರ್. ನಿಯಮ 285(2) ಉಪ ನಿಯಮದ ಅಡಿಯಲ್ಲಿ ಅನ್ವಯವಾಗುವಂತೆ ಕೋರಿದ್ದರು. ತದನಂತರ ದಿನಾಂಕ 08-06-2006ರಂದು ಪುನ: ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ಬೆಂಗಳೂರು ದಿನಾಂಕ 01-09-2003 ಕರ್ನಾಟಕ ಸರ್ಕಾರವು ಕ್ರಮಬದ್ಧ ಹೆಚ್ಚುವರಿ ಸರ್ಕಾರಿ ನೌಕರರಿಗೆ ವಿಶೇಷ ಸ್ವ ಇಚ್ಛಾ ನಿವೃತ್ತಿ ಯೋಜನೆ ಜಾರಿಗೊಳಿಸಿದ್ದು, ಈ ಯೋಜನೆಯ ಪ್ರಮುಖ ಅಂಶಗಳ ಪ್ರಕಾರ ಅನುಗ್ರಹ ಪೂರ್ವಕ ಮೊತ್ತವನ್ನು ಪಡೆಯಲು ಅರ್ಹನಾಗಿರುತ್ತೇನೆ. ಕರ್ನಾಟಕ ಘನ ಸರ್ಕಾರವು ವಿನಯ ಪೂರ್ವಕ ಕೋರಿಕೆಯನ್ನು ಮನಗಂಡು ಇವರ ಸೇವೆಯನ್ನು ಹೆಚ್ಚುವರಿ ಸರ್ಕಾರಿ ನೌಕರನ ವಿಶೇಷ ಸ್ವ ಇಚ್ಛಾ ನಿವೃತ್ತಿ ಎಂದು ಪರಿಗಣಿಸಬೇಕೆಂದು ಸರ್ಕಾರವನ್ನು ವಿನಂತಿಸಿದ್ದರು.

ಶ್ರೀ ಸಿ.ಎಂ.ಮಹದೇವಯ್ಯ, ಸಹಾಯಕ ನಿರ್ದೇಶಕರು ರವರಿಗೆ ಕೆ.ಸಿ.ಎಸ್.ಆರ್. ನಿಯಮ 285(1)(ಎ)ರ ಪ್ರಕಾರ ದಿನಾಂಕ 30-09-2007 ರಿಂದ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಬೇಕು ಎಂದು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 29 ಪೊಸಿಲಿ 2006, ಬೆಂಗಳೂರು ದಿನಾಂಕ 30ನೇ ಏಪ್ರಿಲ್ 2008**

ಶ್ರೀ ಸಿ.ಎಂ.ಮಹದೇವಯ್ಯ, ಸಹಾಯಕ ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಇವರಿಗೆ ಕೆ.ಸಿ.ಎಸ್.ಆರ್ಸ್. ನಿಯಮ 285(1) (ಎ) ರಡಿಯಲ್ಲಿ ಹಾಗೂ ಸದರಿ ನಿಯಮದ ಉಪ ನಿಯಮ(2)ರಡಿಯಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪೂರೈಸುವ ಷರತ್ತಿಗೆ ಒಳಪಟ್ಟು ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಸ್ವಇಚ್ಛಾ ನಿವೃತ್ತಿ ಹೊಂದಲು ಸರ್ಕಾರವು ಅನುಮತಿ ನೀಡಿದೆ.

1) FD 3 SRS 94 ದಿನಾಂಕ 30-07-1994ರ ಅಧಿಕೃತ ಜ್ಞಾಪನದನ್ವಯ ಶ್ರೀಯುತರು ತಮ್ಮ ಗೈರುಹಾಜರಿ ಅವಧಿಗೆ ಉಚಿತ ರೂಪದಲ್ಲಿ ಅಸಾಧಾರಣ ರಜೆಯನ್ನು ಮಂಜೂರು ಮಾಡಲು ಕೋರಿದ್ದಲ್ಲಿ, ಸದರಿ ಅಸಾಧಾರಣ ರಜೆಯನ್ನು ಗರಿಷ್ಠ ಮೂರು ವರ್ಷಗಳ ಮಿತಿಗಳೊಳಪಟ್ಟು ಮಂಜೂರು ಮಾಡತಕ್ಕದ್ದು.
2) ಸ್ವಇಚ್ಛಾ ನಿವೃತ್ತಿ ಹೊಂದುವ ಮೊದಲು ಶ್ರೀಯುತರು ಕೆ.ಸಿ.ಎಸ್.ಆರ್ಸ್.ನ ನಿಯಮ 285(2)ರ ಅಡಿಯಲ್ಲಿ ನಮೂದಿಸಿರುವ ಎಲ್ಲಾ ಷರತ್ತುಗಳನ್ನು ಪೂರ್ಣವಾಗಿ ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
3) ಸರ್ಕಾರಕ್ಕೆ ಬರಬೇಕಾದ ಬಾಕಿ ಮೊತ್ತವನ್ನು ಇವರ ಡಿ.ಸಿ.ಆರ್.ಜಿ.ಯಿಂದ ತಡೆ ಹಿಡಿದು ಉಳಿದ ಮೊತ್ತವನ್ನು ಬಿಡುಗಡೆ ಮಾಡತಕ್ಕದ್ದು.
4) ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ, ಇತ್ಯಾದಿಗಳು ಬಾಕಿ ಇರತಕ್ಕದ್ದಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 716

**ಆರ್. ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ಸುಖಮುನಿ, ನಿವೃತ್ತ ಪಿ.ಎಸ್.ಐ. ಮತ್ತು ಶ್ರೀ.ಹೆಚ್.ಜೆ. ಜಹಾಗೀರ್‌ದಾರ್, ಎಸ್.ಪಿ.ಡಿ.ಸಿ.ಆರ್.ಇ. ದಾವಣಗೆರೆ ರವರ ವಿರುದ್ಧ ಶಿಸ್ತು ಕ್ರಮ – ಇಲಾಖಾ ವಿಚಾರಣೆ ಕುರಿತು – ಆದೇಶ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಡಿಇ– 1/26/2007–08, ದಿನಾಂಕ 23–04–2008.

**ಪ್ರಸ್ತಾವನೆ:**

ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ಶ್ರೀ.ಸುಖಮುನಿ, ಪಿ.ಎಸ್.ಐ. ಈ ಹಿಂದೆ ಅಳವಂಡಿ ಪೊಲೀಸ್ ಠಾಣೆ (ಹಾಲಿ ನಿವೃತ್ತ ವಾಡಿ ಠಾಣೆ, ಗುಲ್ಬರ್ಗಾ ಜಿಲ್ಲೆ) ಮತ್ತು ಶ್ರೀ.ಹೆಚ್.ಜೆ.ಜಹಾಗೀರ್‌ದಾರ್, ಈ ಹಿಂದೆ ಡಿ.ಎಸ್.ಪಿ. ಕೊಪ್ಪಳ (ಸದ್ಯ ಎಸ್.ಪಿ. ಡಿ.ಸಿ.ಆರ್.ಇ. ದಾವಣಗೆರೆ) ಉಪ ವಿಭಾಗ ರವರುಗಳು ಅಳವಂಡಿ ಪೊಲೀಸ್ ಠಾಣೆ ಮೊ.ಸಂ.53/02 ರಲ್ಲಿ ಅತೀವ ನಿರ್ಲಕ್ಷ್ಯತೆ, ಕರ್ತವ್ಯ ಚ್ಯುತಿ ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪವೆಸಗಿರುವುದು ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾ ಮತ್ತು ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ ರವರುಗಳ ದಿನಾಂಕ 01–09–2007 ಮತ್ತು 14–08–2007ರ ಪತ್ರಗಳಲ್ಲಿನ ವರದಿಗಳಿಂದ ತಿಳಿದು ಬಂದಿರುತ್ತದೆ. ಸದರಿ ಅಧಿಕಾರಿಗಳ ಪೈಕಿ ಶ್ರೀ.ಸುಖಮುನಿ, ಪಿ.ಎಸ್.ಐ. ರವರು ದಿನಾಂಕ 31–05–2007 ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿರುತ್ತಾರೆ. ಆದುದರಿಂದ ಸದರಿಯವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214 ರನ್ವಯ ಮತ್ತು ಶ್ರೀ.ಹೆಚ್.ಜೆ.ಜಹಾಗೀರ್‌ದಾರ್, ರವರ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮ, 1965ರ ನಿಯಮ 6 ಮತ್ತು 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಅವರುಗಳ ವಿರುದ್ಧ ವಿಚಾರಣೆ ನಡೆಸಲು ಪೊಲೀಸ್ ಅಧೀಕ್ಷಕರು, ಬಿಜಾಪುರ ಜಿಲ್ಲೆ

ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರುತ್ತಾ ಅವರುಗಳ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

ಡಿಜಿ ಮತ್ತು ಐಜಿಪಿ ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 131 ಪೊಸಿಪ 2008, ಬೆಂಗಳೂರು ದಿನಾಂಕ 30ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ.ಸುಖಮುನಿ, ಪಿ.ಎಸ್.ಐ. ಈ ಹಿಂದೆ ಅಳವಂಡಿ ಪೊಲೀಸ್ ಠಾಣೆ ಹಾಲಿ ನಿವೃತ್ತ (ವಾಡಿ ಠಾಣೆ, ಗುಲ್ಬರ್ಗಾ ಜಿಲ್ಲೆ) ಮತ್ತು ಶ್ರೀ.ಹೆಚ್.ಜೆ.ಜಹಾಗೀರ್‌ದಾರ್, ಈ ಹಿಂದೆ ಡಿ.ಎಸ್.ಪಿ. ಕೊಪ್ಪಳ (ಸದ್ಯ ಎಸ್.ಪಿ. ಡಿ.ಸಿ.ಆರ್.ಇ. ದಾವಣಗೆರೆ) ಉಪ ವಿಭಾಗ ರವರುಗಳ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮ 1965ರ ನಿಯಮ 6ರ ಉಪ ನಿಯಮ 2 ಮತ್ತು 8 ರನ್ವಯ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದೆ. ಶ್ರೀ.ಸುಖಮುನಿ, ನಿವೃತ್ತ ಪಿ.ಎಸ್.ಐ. ರವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214 ರನ್ವಯ ವಿಚಾರಣೆಗೆ ಆದೇಶಿಸಿದೆ. ಹಾಗೂ ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಪೊಲೀಸ್ ಅಧೀಕ್ಷಕರು, ಬಿಜಾಪುರ ಜಿಲ್ಲೆ ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಈ ಸಂಬಂಧವಾಗಿ ಶ್ರೀ.ಸುಖಮುನಿ, ಪಿ.ಎಸ್.ಐ. ಈ ಹಿಂದೆ ಅಳವಂಡಿ ಪೊಲೀಸ್ ಠಾಣೆ (ಹಾಲಿ ನಿವೃತ್ತ ವಾಡಿ ಠಾಣೆ, ಗುಲ್ಬರ್ಗಾ ಜಿಲ್ಲೆ) ಮತ್ತು ಶ್ರೀ.ಹೆಚ್.ಜೆ.ಜಹಾಗೀರ್‌ದಾರ್, ಈ ಹಿಂದೆ ಡಿ.ಎಸ್.ಪಿ. ಕೊಪ್ಪಳ (ಸದ್ಯ ಎಸ್.ಪಿ. ಡಿ.ಸಿ.ಆರ್.ಇ. ದಾವಣಗೆರೆ) ಉಪ ವಿಭಾಗ ರವರುಗಳಿಗೆ ದೋಷಾರೋಪಣಾ ಪಟ್ಟಿ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 4 ತಿಂಗಳೊಳಗಾಗಿ ಅಂತಿಮ ವರದಿ ಸಲ್ಲಿಸುವಂತೆ ಸೂಚಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. ನಂ. 714

**ಆರ್. ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಕೆ.ಪುರುಶೋತ್ತಮ, ಹಿಂದಿನ ಪೊಲೀಸ್ ಇನ್ಸ್‌ಪೆಕ್ಟರ್, ಕಾಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು ಹಾಲಿ ಡಿವೈ.ಎಸ್.ಪಿ. ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ/5/53/07-08, ದಿನಾಂಕ 19-12-2007
2) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ(ಜಿ)/ಬಿಡಿ-36/ಸಿಆರ್-17/ಬಿಎಲ್‌ಆರ್, ದಿನಾಂಕ 09-04-2008.

**ಪ್ರಸ್ತಾವನೆ:**

ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ಶ್ರೀ.ಕೆ.ಪುರುಶೋತ್ತಮ್, ಹಾಲಿ ಡಿವೈ.ಎಸ್.ಪಿ. ರವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ದಿನಾಂಕ 03-11-2007 ರಂದು ಅವರ ಮನೆಯ ಮೇಲೆ ದಾಳಿ ನಡೆಸಿದ್ದು, ಅಧಿಕ ಆಸ್ತಿ ಹೊಂದಿರುವುದು ಬೆಳಕಿಗೆ ಬಂದಿರುವುದರಿಂದ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 13(1)(ಇ) r/w 1392)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವೆಸಗಿರುವುದು ಮೇಲ್ನೋಟಕ್ಕೆ ಗೋಚರವಾಗುತ್ತದೆ. ಆದುದರಿಂದ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ರವರು ಕೋರಿದ್ದು, ಅದರಂತೆ ಸದರಿಯವರನ್ನು ಅಮಾನತ್ತಿನಲ್ಲಿರಿಸಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ರವರಿಂದ ಹೆಚ್ಚುವರಿ ಮಾಹಿತಿ ಹಾಗೂ ಅಭಿಪ್ರಾಯ ಕೋರಲಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮಾಹಿತಿ ನೀಡುತ್ತಾ ಶ್ರೀ.ಕೆ.ಪುರುಷೋತ್ತಮ, ಪೊಲೀಸ್ ಇನ್ಸ್‌ಪೆಕ್ಟರ್, ಕಾಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು ಇವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಹಾಗೂ ಅವರ ಲೀನ್ ಅನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆ ಹಾಗೂ ವರದಿಗಳನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 456 ಪೊಸಿಪ 2008, ಬೆಂಗಳೂರು ದಿನಾಂಕ 26ನೇ ಏಪ್ರಿಲ್ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಕೆ.ಪುರುಶೋತ್ತಮ, ಡಿವೈ.ಎಸ್.ಪಿ ರವರ ವಿರುದ್ಧ

ಅಧೀಕ್ಷಕರು, ಗುಪ್ತವಾರ್ತೆ, ಮಂಗಳೂರು) ರವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಬೆಂಗಳೂರು ಗ್ರಾಮಾಂತರ ಜಿಲ್ಲೆ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 6/2008ರ ಕಲಂ 13(1) (ಇ) r/w 13(2)ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ಕ್ಕೆ ದಿನಾಂಕ 29–01–2008 ರಂದು ಪ್ರಕರಣವನ್ನು ದಾಖಲಿಸಿಕೊಳ್ಳಲಾಯಿತು. ದಾಖಲಿಸಿಕೊಂಡ ನಂತರ ದಿನಾಂಕ 30–01–2008ರಂದು ಪ್ರಧಾನ ಜಿಲ್ಲಾ ಸತ್ರ ಮತ್ತು ವಿಶೇಷ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರಿಂದ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪಡೆದುಕೊಂಡು ದಿನಾಂಕ 31–01–2008 ರಂದು ಆರೋಪಿತ ಅಧಿಕಾರಿಯ 1) ಬಳ್ಳಾರಿಯಲ್ಲಿ ವಾಸವಾಗಿರುವ ಸರ್ಕಾರಿ ವಸತಿ ಗೃಹ ಮತ್ತು ಅವರ ಕಛೇರಿ, 2) ಶಿವಮೊಗ್ಗ ತಾಲ್ಲೂಕು ಹರಿಗೆ ಗ್ರಾಮದ ಸರ್ವೆ ನಂ. 201/ಪಿ–1 ರಲ್ಲಿರುವ ತೋಟದ ಮನೆ, 3) ಶೋಭಾ ನಿಲಯ, ಶ್ರೀ ರಾಮಮಂದಿರ ರಸ್ತೆ, ಜಯನಗರ, ಶಿವಮೊಗ್ಗ ಈ ವಿಳಾಸದಲ್ಲಿರುವ ಮನೆ, 4) ಶ್ರೀ ಕಲ್ಲೇಶ್ವರ ನರ್ಸರಿ ಶಾಲೆ ಮತ್ತು ಆಪಾದಿತರ ಮನೆ ಹಿರೇ ಎಮ್ಮಿಗನೂರು, ಹೊಳಲ್ಕೆರೆ ತಾಲ್ಲೂಕು, 5) ಆರೋಪಿತರ ಸಹೋದರ ಶ್ರೀ ಡಿ.ಸಿ. ಶೇಖರಪ್ಪ ರವರ ಹಿರೇ ಎಮ್ಮಿಗನೂರಿನಲ್ಲಿರುವ ಮನೆ ಹಾಗೂ ಶಿವಮೊಗ್ಗ ಕೆನರಾ ಬ್ಯಾಂಕ್ ಲಾಕರ್ ನಂ. 209ನ್ನು ಪಂಚಸಾಕ್ಷಿಗಳ ಸಕ್ಷಮ ಶೋಧಿಸಿದಾಗ ಅಪಾರ ಮೊತ್ತದ ಸ್ಥಿರ–ಚರಾಸ್ಥಿ ದೊರೆತಿರುತ್ತವೆ. ಪ್ರಾಥಮಿಕ ತನಿಖೆಯಿಂದ ಆರೋಪಿತರು ಅವರ ಬಲ್ಲ ಮೂಲಗಳಿಗಿಂತ ಹೊಂದಿರುವ ಅಕ್ರಮ ಆಸ್ತಿಗಳ ಮೌಲ್ಯ ರೂ. 1,20,33,836/– ಆಗಿರುತ್ತದೆ. ಸದರಿ ಹೆಚ್ಚುವರಿ ಅಕ್ರಮ ಮೂಲಗಳಿಂದ ಗಳಿಸಿರುವ ಚರ–ಸ್ಥಿರ ಆಸ್ತಿಗಳ ಮೌಲ್ಯವು ಆರೋಪಿತ ಸರ್ಕಾರಿ ನೌಕರ ಶೋಧನಾ ಅವಧಿಯಲ್ಲಿ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಹೆಚ್ಚಿನ ಮೊತ್ತವಾಗಿರುತ್ತದೆ. ಅಲ್ಲದೆ, ಆರೋಪಿತರು, ವಿವಿಧ ಬಾಬ್ತುಗಳಿಗಾಗಿ ಮಾಡಿರುವ ಖರ್ಚು–ವೆಚ್ಚಗಳು ಇನ್ನೂ ಕೆಲವು ಮೂಲಗಳಿಂದ ಬರಬೇಕಾಗಿದೆ. ಇದರಿಂದ ಭವಿಷ್ಯದಲ್ಲಿ ಪ್ರಕರಣದ ತನಿಖೆ ಮುಂದುವರೆದಂತೆ ಹೆಚ್ಚಿನ ಚರ–ಸ್ಥಿರಾಸ್ಥಿ ಮತ್ತು ಖರ್ಚು ವೆಚ್ಚಗಳ ಒಟ್ಟಾರೆ ಮೌಲ್ಯವು ಇನ್ನೂ ಹೆಚ್ಚಾಗಿರುವ ಸಂಭವವಿರುತ್ತದೆ. ಈ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಹಾಗೂ ಅವರ ಲೀನ್ ಅನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಎ.ಡಿ.ಜಿ.ಪಿ ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆ ಹಾಗೂ ವರದಿಗಳನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 101 ಪೊಸಿಪ 2008, ಬೆಂಗಳೂರು, ದಿನಾಂಕ 19ನೇ ಮೇ 2008**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5 (1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ. ಡಿ.ಸಿ. ರಾಜಪ್ಪ, ಪೊಲೀಸ್ ಅಧೀಕ್ಷಕರು, ಗುಪ್ತವಾರ್ತೆ, ಮಂಗಳೂರು ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ. ಇವರ ಲೀನ್ ಅನ್ನು ಗುಪ್ತವಾರ್ತೆ ಮಂಗಳೂರು ಇಲ್ಲಿನ ಪೊಲೀಸ್ ಅಧೀಕ್ಷಕ ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಡಾ. ಡಿ.ಸಿ. ರಾಜಪ್ಪ, ಪೊಲೀಸ್ ಅಧೀಕ್ಷಕರು ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಡಾ. ಡಿ.ಸಿ. ರಾಜಪ್ಪ ಪೊಲೀಸ್ ಅಧೀಕ್ಷಕರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 819

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಕೆ. ಶ್ರೀನಿವಾಸನ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ, ರಾಯಚೂರು ಇವರನ್ನು ಸೇವೆಯಿಂದ ಅಮಾನತ್ತುಪಡಿಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಕಾರ್ಯದರ್ಶಿ, ಭಾರತ ಚುನಾವಣಾ ಆಯೋಗ ಇವರ ಪತ್ರ ಸಂಖ್ಯೆ: 464/ಕೆಟಿ–ಎಲ್ಎ 2008, ದಿನಾಂಕ 12/05/2008

**ಪ್ರಸ್ತಾವನೆ:**

ಪ್ರಧಾನ ಕಾರ್ಯದರ್ಶಿ, ಭಾರತ ಚುನಾವಣಾ ಆಯೋಗ, ನವದೆಹಲಿ ಇವರು ಮೇಲೆ ಓದಲಾದ ದಿನಾಂಕ 12/05/2008ರ ಪತ್ರದಲ್ಲಿ ಶ್ರೀ ಹೆಚ್.ಕೆ. ಶ್ರೀನಿವಾಸನ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ, ರಾಯಚೂರು ಇವರನ್ನು 59–ಮಸ್ಕಿ ವಿಧಾನಸಭಾ ಕ್ಷೇತ್ರಕ್ಕೆ ನೋಡಲ್ ಅಧಿಕಾರಿಯಾಗಿ ನೇಮಿಸಿದ್ದು, ಸದರಿಯವರಿಗೆ ಸಂಬಂಧಪಟ್ಟ

ರಿಟರ್ನಿಂಗ್ ಅಧಿಕಾರಿಯವರು ವಹಿಸಿದ ಕರ್ತವ್ಯಗಳನ್ನು ನಿರ್ವಹಿಸಲು ವಿಫಲರಾದ ಕಾರಣ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಪಡಿಸಲು ನಿರ್ದೇಶಿಸಿದೆ.

ಯಾವುದೇ ಅಧಿಕಾರಿ/ನೌಕರರನ್ನು ಚುನಾವಣಾ ಕೆಲಸಕ್ಕೆ ನಿಯೋಜಿಸಿದ್ದಲ್ಲಿ, ಚುನಾವಣಾ ಕೆಲಸಗಳನ್ನು ತಪ್ಪದೆ ನಿರ್ವಹಿಸಬೇಕಾಗಿರುತ್ತದೆ. ಆದರೆ, ಶ್ರೀ ಹೆಚ್.ಕೆ. ಶ್ರೀನಿವಾಸನ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ, ರಾಯಚೂರು ಇವರು ಮೇಲೆ ವಿವರಿಸಿದಂತೆ ಚುನಾವಣಾ ಕೆಲಸವನ್ನು ನಿರ್ವಹಿಸಲು ವಿಫಲರಾಗಿ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಸದರಿಯವರನ್ನು ಸೇವೆಯಿಂದ ಅಮಾನತ್ತುಪಡಿಸಲು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 55 ಅಇವಿ 2008 ಬೆಂಗಳೂರು, ದಿನಾಂಕ 12ನೇ ಮೇ 2008**

ಶ್ರೀ ಹೆಚ್.ಕೆ. ಶ್ರೀನಿವಾಸನ್, ಉಪ ಅರಣ್ಯ ಸಂರಕ್ಷಣಾಧಿಕಾರಿ (ಸಾಮಾಜಿಕ ಅರಣ್ಯ), ರಾಯಚೂರು ಇವರು ಚುನಾವಣಾ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1) (ಡಿ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಇವರನ್ನು ಸೇವೆಯಿಂದ ಅಮಾನತ್ತುಪಡಿಸಿದೆ.

ಈ ಅಧಿಕಾರಿಯವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಈ ಅಧಿಕಾರಿಯವರು ನಿಯಮಾನುಸಾರ ಲಭ್ಯವಿರುವ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 820

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಕೆಸಿಎಸ್ (ಸಿಸಿಎ) ನಿಯಮಾವಳಿಗಳ ನಿಯಮ 18ರಡಿ ಸಲ್ಲಿಸಿರುವ ಮೇಲ್ಮನವಿ ಕುರಿತು–ಆದೇಶ.

**ಉಲ್ಲೇಖ:**

1 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಎಡಿಎಂ/241/2001 ದಿನಾಂಕ: 21.5.2001.

2 ಸರ್ಕಾರಿ ಆದೇಶ ಸಂಖ್ಯೆ ಲಾ 186 ಪಿಪಿಇ 01 ದಿನಾಂಕ 06.05.2003

3 ಸರ್ಕಾರಿ ಆದೇಶ ಸಂಖ್ಯೆ ಒಇ 716 ಪಿಪಿಇ 05 ದಿನಾಂಕ 02.02.2007

4 ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿರುವ ದಿನಾಂಕ: 16.4.07ರ ಮೇಲ್ಮನವಿ.

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಚಿಕ್ಕಮಗಳೂರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅಪರ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ನ್ಯಾಯಾಲಯದ ಎಸ್.ಸಿ. ಸಂಖ್ಯೆ 124/99ನ್ನು ನ್ಯಾಯಾಲಯದಲ್ಲಿ ನಡೆಸುವಾಗ ಪ್ರಕರಣದಲ್ಲಿ ನಾಲ್ಕು ಮಂದಿ ಕೊಲೆಯಾಗಿದ್ದು ತತ್ಸಂಬಂಧ ಆರೋಪಿತರಿಂದ ಜಪ್ತಿಮಾಡಿದ ರಕ್ತಹತ್ತಿದ ಬಟ್ಟೆಗಳು ಮತ್ತು ಮೃತಳಿಗೆ ಸೇರಿದ ಕರಿಮಣಿ ಗುಂಡುಗಳನ್ನು ಗುರುತಿಸಿರುವುದಿಲ್ಲ ಹಾಗೂ ವೈದ್ಯಾಧಿಕಾರಿಗಳನ್ನು ಪರೀಕ್ಷಿಸದೇ ಕರ್ತವ್ಯ ನಿರ್ಲಕ್ಷ್ಯ ತೋರಿಸಿದ ಸಂಬಂಧ ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಅಡಿಯಲ್ಲಿ ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದ ಮೇರೆಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 6.5.01ರಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸಲಾಗಿತ್ತು.

ಅದರಂತೆ, ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಹಾಗೂ ಆರೋಪಿತ ಅಧಿಕಾರಿಯು 2ನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿದ್ದ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ದಿನಾಂಕ: 2.2.07ರ ಆದೇಶದಲ್ಲಿ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (2)ರ ಅಡಿಯಲ್ಲಿ ಇವರ ವಿರುದ್ಧ ಸಾಭೀತಾದ ಆಪಾದನೆಗಳ ತೀವ್ರತೆಯನ್ನು ಪರಿಗಣಿಸಿ ಆರೋಪಿತ ಸರ್ಕಾರಿ ಅಧಿಕಾರಿಯು ಧಾರಣೆ ಮಾಡಿರುವ ಹುದ್ದೆಯ ವೇತನ ಶ್ರೇಣಿ 9580–260–10880–320–13440ರ ಕನಿಷ್ಠ ಹಂತ ರೂ. 9580/–ಕ್ಕೆ ಎರಡು ವರ್ಷಗಳ ಅವಧಿಗೆ ಇಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಸದರಿ ದಂಡನೆಯನ್ನು ವಿಧಿಸಿದ ಸರ್ಕಾರದ ಕ್ರಮವನ್ನು ಪ್ರಶ್ನಿಸಿ ಮೇಲೆ (4)ರಲ್ಲಿ ಓದಲಾಗಿರುವ ಪತ್ರದಲ್ಲಿ ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಹಾಸನ ಇವರು ಘನತೆವೆತ್ತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ್ದರು. ತತ್ಸಂಬಂಧ ಕಂಡಿಕೆವಾರು ಷರಾ ಮತ್ತು ನಿವೇದನಾ ಟಿಪ್ಪಣಿಗಳು ಘನ ರಾಜ್ಯಪಾಲರಿಗೆ ಸಲ್ಲಿಸಲಾಗಿತ್ತು ಸದರಿ ಮೇಲ್ಮನವಿಯನ್ನು ಪರಿಶೀಲಿಸಿದ ಘನತೆವೆತ್ತ ರಾಜ್ಯಪಾಲರು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 716 ಪಿಪಿಇ 2005, ಬೆಂಗಳೂರು ದಿನಾಂಕ 23ನೇ ಮೇ 2008**

"I have considered the appeal petition submitted under Rule 18 of KCS (CCA) Rules 1957 by Sri M. Narasappa, Principal Public Prosecutor, Hassan against the orders of Government in No. OE 716 PPE 2005 dated 2.2.2007 imposing the penalty of reducing the pay of the AGO to the minimum of the Pay Scale he is drawing (Rs. 9580-260-10880-320-13440) for a period of 2 years in the light of the contentions made in the appeal petitions and the connected enquiry and appeal records.

Apparently the charge of dereliction of duty, misconduct and negligence in handling the case which resulted in acquittal of the accused who has involved in murder of four persons have been proved in the enquiry.

The contention of the appellant that he belongs to the down trodden and backward class person having minor children and is in his fag end of his service and it would result in irreparable injury, hardship, stigma and mental agony etc., does not merit consideration.

I therefore, dismiss the appeal petition and uphold the orders of the Government as disciplinary authority.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 821

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಶ್ರೀ ವಿ.ಎಸ್. ಮಲ್ಲಿಕಾರ್ಜುನ ಸ್ವಾಮಿ, ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಇವರಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1 ಕಛೇರಿ ಆದೇಶ ಸಂಖ್ಯೆ: ಕಸನಿ 15 ಸಿಬ್ಬಂದಿ 2004–05 ದಿ: 1–2–2006.
2 ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ/1/ಸಿಬ್ಬಂದಿ/2007–08 ದಿನಾಂಕ: 26–5–2007.
3 ಕಸನಿ/1/ಸಿಬ್ಬಂದಿ/2007–08 ದಿ 26–5–2007ರ ಅಧಿಕೃತ ಜ್ಞಾಪನ

**ಪ್ರಸ್ತಾವನೆ:**

ಕನ್ನಡ ಪುಸ್ತಕ ಪ್ರಾಧಿಕಾರದ, ಆಡಳಿತಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಎನ್. ತಿಪ್ಪೇಸ್ವಾಮಿ ಅವರು ಕರ್ನಾಟಕ ಲೋಕಸೇವಾ ಆಯೋಗದಿಂದ ತಹಸೀಲ್ದಾರ್ ಹುದ್ದೆಗೆ ನೇರ ನೇಮಕಗೊಂಡ ಕಾರಣ ತೆರವಾದ ಆಡಳಿತಾಧಿಕಾರಿ, ಕನ್ನಡ ಪುಸ್ತಕ ಪ್ರಾಧಿಕಾರ ಹುದ್ದೆಯಲ್ಲಿ ಶ್ರೀ ವಿ.ಎಸ್ ಮಲ್ಲಿಕಾರ್ಜುನ ಸ್ವಾಮಿ, ರಿಜಿಸ್ಟ್ರಾರ್ ರನ್ನು ಮೇಲೆ (1)ರಲ್ಲಿ ಓದಲಾದ ಕಛೇರಿ ಆದೇಶದಲ್ಲಿ ಪ್ರಭಾರದಲ್ಲಿಡಲಾಯಿತು. ಮೇಲೆ (1)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರು ಪತ್ರದಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರದತ್ತವಾದ ಅಧಿಕಾರದನ್ವಯ ಶ್ರೀಯುತರಿಗೆ ದಿ: 2–2–06 ರಿಂದ 1–6–2006 ರವರೆಗೆ 4 ತಿಂಗಳ ಅವಧಿಗೆ ಮೇಲೆ (3)ರಲ್ಲಿ ಓದಲಾದ ಆ ಜ್ಞಾಪನದನ್ವಯ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದೆ ಎಂದು ತಿಳಿಸಿ ಉಳಿದ ಅವಧಿಗೆ ದಿ: 2–6–2006 ರಿಂದ 20–2–2007 ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 143 ಕಸನಿ 2007, ಬೆಂಗಳೂರು ದಿನಾಂಕ: 28ನೇ ಏಪ್ರಿಲ್ 2008**

ಶ್ರೀ ವಿ.ಎಸ್ ಮಲ್ಲಿಕಾರ್ಜುನ ಸ್ವಾಮಿ, ರಿಜಿಷ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಇವರಿಗೆ ದಿ: 2–6–2006 ರಿಂದ 20–2–2007 ರವರೆಗೆ ಆಡಳಿತಾಧಿಕಾರಿ, ಕನ್ನಡ ಪುಸ್ತಕ ಪ್ರಾಧಿಕಾರ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ್ದಕ್ಕಾಗಿ ಕೆ.ಸಿ.ಎಸ್.ಆರ್. ನಿಯಮ 68ರ ಮೇರೆಗೆ ಆಡಳಿತಾಧಿಕಾರಿ ಹುದ್ದೆಯ ವೇತನ ಶ್ರೇಣಿ ರೂ. 7400–13120ರ ಕನಿಷ್ಠ ವೇತನ ರೂ. 7,400–00 ಶೇ. 5 ರಷ್ಟು ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿ: 10–7–06ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 825

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಸತಿ ಸಚಿವಾಲಯ**

**ವಿಷಯ:** ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಒಂದು ಸಹಾಯಕ ಆಯುಕ್ತರ ಹುದ್ದೆಯನ್ನು ಉಪ ಆಯುಕ್ತರ ಒಂದು ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1 ಅಧಿಸೂಚನೆ ಸಂಖ್ಯೆ: ಸಿಆಸುಇ 143 ಆಸೇವ 07, ದಿನಾಂಕ: 12–03–2008.

2 ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯವರ ಪತ್ರ ಸಂಖ್ಯೆ: ಕಕೊನಿಮ: ಆಡಳಿತ/22/2007–08/204, ದಿನಾಂಕ: 15–03–08

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1ರಲ್ಲಿ ಪ್ರಸ್ತುತ ಹಾಲಿ ಶ್ರೀ ಇತೇಶ್ ಮುಲ್ ಹಕ್‌ರವರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಸಹಾಯಕ ಆಯುಕ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಈ ಹುದ್ದೆಯನ್ನು ಬಡ್ತಿ ಮೂಲಕ ಉನ್ನತೀಕರಿಸಿ, ಶ್ರೀ ಇತೇಶ್ ಮುಲ್ ಹಕ್‌ರವರನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ಇಲ್ಲಿಗೆ ಉಪ ಆಯುಕ್ತರನ್ನಾಗಿ ಮುಂದುವರಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 2ರ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯವರ ಪತ್ರದಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಸರ್ಕಾರದಿಂದ ಸಹಾಯಕ ಆಯುಕ್ತರ 1 ಹುದ್ದೆಯು ಮಾತ್ರ ಮಂಜೂರಾಗಿದ್ದು, ಉಪ ಆಯುಕ್ತರ ಹುದ್ದೆಯು ಮಂಜೂರಾಗಿರುವುದಿಲ್ಲವೆಂದು ಹಾಗೂ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮದ ಷೆಡ್ಯೂಲ್ 1ರಲ್ಲಿ ಸಹಾಯಕ ಆಯುಕ್ತರ ಹುದ್ದೆ ಮಾತ್ರ ಇದ್ದು, ಉಪ ಆಯುಕ್ತ ಹುದ್ದೆಗೆ ಉನ್ನತೀಕರಿಸಬೇಕಾದಲ್ಲಿ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಬೇಕಾಗುತ್ತದೆಂದು ತಿಳಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಒಂದು ಸಹಾಯಕ ಆಯುಕ್ತರ ಹುದ್ದೆಯಿದ್ದು, ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಈ ಹುದ್ದೆಯನ್ನು ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದದಿಂದ ನಿಯೋಜನೆ ಮೇಲೆ ಭರ್ತಿ ಮಾಡಬಹುದಾಗಿದ್ದು, ಶ್ರೀ ಇತೇಶ್ ಮುಲ್‌ಹಕ್, ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿ ಇವರಿಗೆ ಹಿರಿಯ ಶ್ರೇಣಿಗೆ ಬಡ್ತಿ ನೀಡಿ ಮಂಡಳಿಯಲ್ಲಿ ಹಾಲಿ ಇರುವ ಹುದ್ದೆಯನ್ನು ಉಪ ಆಯುಕ್ತರು ಎಂದು ತಾತ್ಕಾಲಿಕವಾಗಿ ಉನ್ನತೀಕರಿಸಿ, ಅಲ್ಲಿಯೇ ಮುಂದುವರೆಸುವ ವಿಷಯವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 10 ಕೊಮಂಸೇ 2008, ಬೆಂಗಳೂರು ದಿನಾಂಕ: 21ನೇ ಮೇ 2008**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿನ ಸಹಾಯಕ ಆಯುಕ್ತರ ಒಂದು ಹುದ್ದೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ದಿನಾಂಕ: 12–03–2008ರ ಅಧಿಸೂಚನೆಯ ಮೇರೆಗೆ, ಶ್ರೀ ಇತೇಶ್ ಮುಲ್ ಹಕ್‌ರವರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಮುಂದುವರಿಯುವವರೆಗೆ ಮಾತ್ರ ಎಂಬ ಷರತ್ತಿಗೊಳಪಟ್ಟು ತಾತ್ಕಾಕಲಿವಾಗಿ ಉಪ ಅಯುಕ್ತರ ವೃಂದಕ್ಕೆ ಉನ್ನತೀಕರಿಸಲಾಗಿದೆ.

ಉನ್ನತೀಕರಿಸಲಾಗುವ ಹುದ್ದೆಗೆ ಹೆಚ್ಚುವರಿಯಾಗಿ ತಗಲುವ ವೆಚ್ಚವನ್ನು ಸದರಿ ಮಂಡಳಿಗೆ ಒದಗಿಸಿದ ಆಯವ್ಯಯದಲ್ಲೇ ಭರಿಸತಕ್ಕದ್ದು.

ಈ ಆದೇಶವನ್ನು ಸಿಆಸುಇ ಇಲಾಖೆಯ ಹಿಂಬರಹ ಸಂಖ್ಯೆ: ಸಿಆಸುಇ 66 ಆಸೇವ 08, ದಿನಾಂಕ: 30–04–2008ರಲ್ಲಿ ನೀಡಿದ ಸಹಮತಿಯೊಡನೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 830

**ಜಿ.ಆರ್. ನಾಗರಾಜ್**
ಪೀಠಾಧಿಕಾರಿ–4
ವಸತಿ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** ಮೆ:: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಮಂಜಡಕ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ಡಿಇ 74 ಎನ್‌ಸಿಇ 1999 ದಿನಾಂಕ: 10.4.2002.
2 ಸರ್ಕಾರಿ ಆದೇಶ ಸಂಖ್ಯೆ: ಇಎನ್ 221 ಎನ್‌ಸಿಇ 2006 ದಿನಾಂಕ: 6.6.2006.
3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಮಂಜಡಕ/2008/761 ದಿನಾಂಕ: 16.5.2008.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಕರಿಕೆ ಗ್ರಾಮದ ಭಾಗಮಂಡಲ ಪಟ್ಟಣ ಬಳಿ ಮಂಜಡಕ ನದಿಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಮಂಜಡಕ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಮಂಜಡಕ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶವನ್ನು ದಿನಾಂಕ: 30.6.2008ರ ವರೆಗೆ ವಿಸ್ತರಿಸಲಾಗಿತ್ತು.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಕರಿಕೆ ಗ್ರಾಮದ ಭಾಗಮಂಡಲ ಪಟ್ಟಣ ಬಳಿ ಮಂಜಡಕ ನದಿಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಮಂಜಡಕ ಕಿರು ಜಲ ವಿದ್ಯುತ್ ಯೋಜನೆಗೆ ಮಳೆಯಿಂದಾಗಿ ಕಾಮಗಾರಿ ಪೂರ್ಣಗೊಳ್ಳಲು ವಿಳಂಬವಾಗಿರುವುದರಿಂದ ಅನುಷ್ಠಾನದ ಕಾಲಾವಕಾಶವನ್ನು ದಿನಾಂಕ: 30.6.2009ರ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 155 ಎನ್‌ಸಿಇ 2008, ಬೆಂಗಳೂರು ದಿನಾಂಕ: 24ನೇ ಮೇ 2008**

ಮೆ:: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಕರಿಕೆ ಗ್ರಾಮದ ಭಾಗಮಂಡಲ ಪಟ್ಟಣ ಬಳಿ ಮಂಜಡಕ ನದಿಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಮಂಜಡಕ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 1.7.2008 ರಿಂದ 30.6.2009ರ ಅವಧಿಗೆ ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 831

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**HEALTH AND FAMILY WELFARE SECRETARIAT**

**Sub:** Appointment of IT Professionals to assist NIC in HMIS implementation – reg.

**Read :** 1 O.M. No. KHSDRP/HMIS-05/2007-08, dated 21.11.2007.

**Preamble:**

The Health Management Information System (HMIS) under Karnataka Health System Development and Reform Project is a nodal unit for developing an integrated HMIS for the Health and Family Welfare Services.

A Task Force Committee under the Chairmanship of the Project Administrator, KHSDRP has been constituted for HMIS, vide O.M. read above. A representative from the National Informatics Centre, Bangalore has been made a Member of the said Committee. The Committee has since met and discussed about formulating an integrated reporting format for all data required for HMIS, for the State Health & Family Welfare Services. This has been envisaged in the Project Appraisal Document that also allows for making use of additional investments (under Project Management, Monitoring and Evaluation, i.e., component 3 of the Project) to strengthen the quality of data collection and analysis. It was also decided that all information currently being received in different formats by the State Headquarters should be properly formatted and uniformly designed such that a simple but comprehensive reporting format could be developed.

Presently, information is also received at the HMIS facility in the KHSDRP Project Office. It has been decided that NIC will help the Project in implementation of HMIS. the NIC will select suitable persons who will be hired by KHSDRP for assisting NIC. The candidates will act as a technical support for customisation, development and implementation of various packages. The same has been informed to World Bank. Task Team Leader and reply is awaited.

Accordingly NIC has followed procedure of selection and shortlisted 3 persons referred by NICSI empanelled vendor HCL Infosystems, who can assist it in HMIS implementation process.

Hence the following order.

**Government Order No. KHSDRP/HMIS/05/2007-08 Bangalore Dated 28th April 2008**

Under the circumstances mentioned in the preamble, Government are pleased to appoint the following persons under HMIS operating expenses.

| Sl. No. | Name | Designation | Remuneration in rupees per month | Date of Reporting |
|---|---|---|---|---|
| 1. | Mr. Balachandra Reddy (BE) | Programmer | 15,000.00 | 24.03.2008 |
| 2. | Mr. D.L. Devraj (M.Tech) | Programmer | 15,000.00 | 01.04.2008 |
| 3. | Ms. Priya Shirodkar (BE) | Asst. Programmer | 10,000.00 | 26.03.2008 |

In order to speed up the progress under HMIS the shortlisted candidates have already been instructed to start work and have reported for duty as mentioned above. Their main activities will include.

a) Customisation of Equipment Management of Rajasthan model.
b) Adopting existing HMIS into web based application
c) Adopting Samanya Mahiti GIS-with health layers.

along with necessary work required of them by NIC or the Project towards implementation of HMIS. They shall enter into an agreement/contract containing the Terms of Reference, with KHSDRP. The period of contract shall come into effect from the date of their reporting for duty. The expenditure towards hiring of these IT Professionals shall be included under component 3 i.e., Project Management, Monitoring and Evaluation HMIS as per Project Appraisal Document under Operating Expenses.

The initial period of contract will be 1 year and will be extended on a one year basis for the project period depending on their performance. Under no circumstances will their contract extend beyond the Project period.

The expenditure in this behalf shall be debited to the Budget Head "2210-06-800-0-84-051 (General Expenses)" during the year 2008-09.

By order and in the Name of the President of India
**SUSHAMA GODBOLE**
Deputy Secretary to Government,
KHSDRP
Department of Health and Family Welfare

PR. 832

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಸಚಿವಾಲಯ**

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ 2008–09ನೇ ಸಾಲಿಗೆ ರಾಜ್ಯ ಹೆದ್ದಾರಿಗಳ ಮೂರು ವರ್ಷಗಳ ನಿರ್ವಹಣೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಡಿಸಿಎಲ್/ ಎಂ.ಡಿ./2008–09/0192 ದಿನಾಂಕ: 29.04.2008.

**ಪ್ರಸ್ತಾವನೆ:**

2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3054–03–337–0–05–200" ರಾಜ್ಯ ಹೆದ್ದಾರಿಗಳ ನಿರ್ವಹಣೆ (ಯೋಜನೇತರ) ಅಡಿಯಲ್ಲಿ ರೂ. 66.00 ಕೋಟಿಗಳನ್ನು ನಿಗಧಿಪಡಿಸಲಾಗಿದೆ.

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ದಿನಾಂಕ 29–04–2008ರಲ್ಲಿ ನಿಗಮದ ವತಿಯಿಂದ ಕೈಗೊಳ್ಳಲಾಗಿರುವ 3 ವರ್ಷಗಳ ರಾಜ್ಯ ಹೆದ್ದಾರಿಗಳ ನಿರ್ವಹಣೆ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿಸಲು ರೂ. 40.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 19 ಇಎಪಿ 2008 ಬೆಂಗಳೂರು ದಿನಾಂಕ: 15ನೇ ಮೇ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಳ್ಳಲಾಗುತ್ತಿರುವ ರಾಜ್ಯ ಹೆದ್ದಾರಿಗಳ 2005–08 ರವರೆಗಿನ ಮೂರು ವರ್ಷಗಳ ನಿರ್ವಹಣೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಲಾಗಿರುವ ರೂ. 66.00 ಕೋಟಿಗಳ ಪೈಕಿ ರೂ. 16.50 (ಹದಿನಾರು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಕೋಟಿಗಳನ್ನು ಮೊದಲನೇ ಕಂತಾಗಿ ಲೆಕ್ಕ ಶೀರ್ಷಿಕೆ "3054–03–337–0–05–200" ರಾಜ್ಯ ಹೆದ್ದಾರಿಗಳ ನಿರ್ವಹಣೆ (ಯೋಜನೇತರ) ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

2. ಮುಂದುವರೆದು, ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲು ರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ ಇಲಾಖೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಲೋಇ/279/ಆಕೋ.1/08 ದಿನಾಂಕ 14–05–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 837

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲ ಸಾರಿಗೆ ಇಲಾಖೆ (ಇಎಪಿ)

**ವಿಷಯ:** 2008–09 ರಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ನಿಗಧಿಪಡಿಸಲಾಗಿರುವ ಬಂಡವಾಳ ವೆಚ್ಚದಡಿಯಲ್ಲಿ ಬಾಕಿ ಇರುವ ಅನುದಾನವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1 ಸರ್ಕಾರದ ಸಮ ಸಂಖ್ಯೆ ಆದೇಶ ದಿನಾಂಕ 19–04–2008
2 ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಡಿ.ಸಿ.ಎಲ್/ಎಂ.ಡಿ/95/2008–09 ದಿನಾಂಕ 17–04–2008.

**ಪ್ರಸ್ತಾವನೆ:**

ಓದಲಾದ (1)ರಲ್ಲಿನ ಸರ್ಕಾರಿ ಆದೇಶದಲ್ಲಿ, 2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸರ್ಕಾರದಿಂದ ಬಂಡವಾಳ ವೆಚ್ಚದಡಿಯಲ್ಲಿ ನಿಗಧಿಪಡಿಸಲಾಗಿದ್ದ 300.00 ಕೋಟಿ ರೂ.ಗಳಲ್ಲಿ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17ನ್ನು 4 ಪಥದ ರಸ್ತೆಯನ್ನಾಗಿ ಪರಿವರ್ತಿಸುವಲ್ಲಿನ ಬೆಂಗಳೂರು–ಮದ್ದೂರು ಭಾಗದ ಕಾಮಗಾರಿಯನ್ನು ಆನ್ಯೂಟಿ ಆಧಾರದ ಮೇಲೆ ಕೈಗೊಂಡು ಮುಗಿಸಿರುವ ಮೆ: ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ. ಲಿ. ಇವರಿಗೆ 4ನೇ ಕಂತಿನ ಸೆಮಿ ಅನ್ಯೂಟಿ ಮೊತ್ತ 29.70 ಕೋಟಿ ರೂ.ಗಳನ್ನು ಲೆಕ್ಕಶೀರ್ಷಿಕೆ "5054–80–190–0–01–132–ಬಂಡವಾಳ ವೆಚ್ಚ (ಯೋಜನೆ)" ಅಡಿಯಲ್ಲಿ ಪಾವತಿಸಲು ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಓದಲಾದ (2)ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, ಈಗಾಗಲೇ ನಿಗಮದಿಂದ ಕೈಗೊಳ್ಳಲಾಗುತ್ತಿರುವ ಪ್ರಗತಿಯಲ್ಲಿರುವ ಕಾಮಗಾರಿಗಳ ಬಿಲ್ಲುಗಳ ಪಾವತಿಗಾಗಿ ಮೇಲಿನ ಲೆಕ್ಕಶೀರ್ಷಿಕೆಯಡಿಯಲ್ಲಿ ಬಾಕಿ ಉಳಿದಿರುವ ರೂ. 270.30 ಕೋಟಿಗಳಲ್ಲಿ ರೂ. 100.00 ಕೋಟಿಗಳ ಮೊತ್ತವನ್ನು ನಿಗಮಕ್ಕೆ ಬಿಡುಗಡೆ ಮಾಡುವಂತೆ ಕೋರಿರುವರು.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ/28/ಇಎಪಿ/2008 ಬೆಂಗಳೂರು ದಿನಾಂಕ 14ನೇ ಮೇ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಳ್ಳಲಾಗುತ್ತಿರುವ ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 45.30 ಕೋಟಿ ರೂ.ಗಳನ್ನು (ನಲವತ್ತೈದು ಕೋಟಿ ಮೂವತ್ತು ಲಕ್ಷಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–132–ಬಂಡವಾಳ ವೆಚ್ಚ (ಯೋಜನೆ)" ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಆದೇಶ ಹೊರಡಿಸಲಾಗಿದೆ.

ಮುಂದುವರೆದು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ 45.30 ಕೋಟಿ ರೂಪಾಯಿಗಳ (ನಲವತ್ತೈದು ಕೋಟಿ ಮೂವತ್ತು ಲಕ್ಷಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ. 17 (ಸಿ) 4ರಲ್ಲಿನಂತೆ ಮಹಾಲೇಖಪಾಲರು (ಎ ಅಂಡ್ ಇ) ಇವರಿಂದ ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ

ಮೇಲುರುಜು ಮಾಡಿಸುವುದು ಅಲ್ಲದೆ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/260/ಆಕೋ.1/08 ದಿನಾಂಕ 07–05–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 838

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**HEALTH AND FAMILY WELFARE SECRETARIAT**

**Sub:** Need Based Assessment study for Organisation Development KHSDRP-reg.

**Read :** Govt. Order No. HFW/KHSDRP/OD/Study 55/2007-08 dt. 28.03.2008

**Preamble:**

In the Govt. Order read above, The Institution of Population Health and Clinical Research St. John's National Academy of Health Sciences, Sarjapur Road, Bangalore-560 034 have been appointed as Consultants for the Need Based Assessment Study under Organisation Development component of KHSDRP, for an agreed cost of Rs. 14,13,980/- Payment of first instalment i.e., after submission of inception report (20%) has been made to the Consultant in accordance with the Terms of Reference, that form a part of the contract agreement. On submission of interim report, the Consultants have requested for release of second instalment.

The expenditure incurred so far towards this assignment has been debited under the Budget Head "2210-06-800-0-84 (P) 051 General Expenses Project Management and Evaluation" during the year 2007-08.

Now it is required to make the remaining payment to the said firm during the current financial year i.e., 2008-09.

Hence the following order.

**Govt. Order No. HFW/KHSDRP/OD/Study 55/2007-08, Bangalore Dated 24th May 2008**

Under the circumstances mentioned in the preamble, Government are hereby pleased to approve the balance payment due to the Institution of Population Health and Clinical Research, St. John's National Academy of Health Sciences, Sarjapur road, Bangalore-560034 for the Need Based Assessment Study under Organisation Development component of KHSDRP, for Rs. 14,13,980/- (Rupees fourteen lakhs thirteen thousand nine hundred and eighty) only. The balance payment due to the firm shall be made as per the Terms of Reference as mentioned in the above Govt. Order.

The above expenditure towards balance payment to M/s. Institution of Population Health and Clinical Research, Bangalore shall be debited under the Head of Account "2210-06-800-0-84 (P) 051 General Expenses Project Management and Evaluation" for the year 2008-09

By order and in the Name of the President of India

PR. 839

**SUSHAMA GODBALE**
Deputy Secretary to Government,
KHSDRP
Health and Family Welfare Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಜಿಲ್ಲಾ ಆಸ್ಪತ್ರೆ, ಬೀದರ್ ಇಲ್ಲಿ ಸರ್ಕಾರಿ ಹಣದ ದುರುಪಯೋಗ ಹಾಗೂ ಅವ್ಯವಹಾರದ ಬಗ್ಗೆ ಇಲಾಖಾ ವಿಚಾರಣಾ ವರದಿ ಅಂತಿಮ ಆದೇಶ.

**ಓದಲಾಗಿದೆ:**
1 ಸರ್ಕಾರದ ಪತ್ರ ಸಂಖ್ಯೆ: ಆಕುಕ 243 ಎಂಎಸ್ಎ 2003, ದಿ: 21–08–2006.
2 ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 243 ಎಂಎಸ್ಎ 2003, ದಿ: 21/08/2006
3 ಡಾ. ಕೆ. ಪ್ರಾಣೇಶ, (ನಿವೃತ್ತ) ವಿಭಾಗೀಯ ಸಹ ನಿರ್ದೇಶಕರು ಇವರ ರಕ್ಷಣಾ ಹೇಳಿಕೆ ದಿ: 14/09/2006.

4 ಡಾ. ವಿ.ಎನ್. ನಿಂಬೂರ್, ನಿವೃತ್ತ ಜಿಲ್ಲಾ ಶಸ್ತ್ರ ಚಿಕಿತ್ಸಕರು ಇವರ ರಕ್ಷಣಾ ಹೇಳಿಕೆ ದಿ: 7/09/2006.
5 ಡಾ. ಸುಮೇಧಾ ಆರ್. ದೇಸಾಯಿ, ಪ್ರಾಂಶುಪಾಲರು ಇವರ ರಕ್ಷಣಾ ಹೇಳಿಕೆ ದಿ: 09/09/2006.
6 ಡಾ. ಶೋಭಾ ಲ. ರಸಾಳಕರ, ನಿವೃತ್ತ ಉಪ ನಿರ್ದೇಶಕರು ಇವರ ರಕ್ಷಣಾ ಹೇಳಿಕೆ ದಿ: 06/09/2006.
7 ಶ್ರೀ ರಘುನಾಥ, ನಿವೃತ್ತ ಕಛೇರಿ ಅಧೀಕ್ಷಕರು ಇವರ ರಕ್ಷಣಾ ಹೇಳಿಕೆ ದಿ: 22/09/2006.
8 ಶ್ರೀ ಬಿ. ಜನಾರ್ಧನ, ಪ್ರ.ದ.ಸ ಇವರ ರಕ್ಷಣಾ ಹೇಳಿಕೆ, ದಿ: 22/09/2006.
9 ಶ್ರೀ ಶಿವಕುಮಾರ ಸ್ವಾಮಿ ದ್ವಿ.ದ.ಸ. ಇವರ ರಕ್ಷಣಾ ಹೇಳಿಕೆ, ದಿ: 22/11/2006.
10 ಶ್ರೀ ದಿಲೀಪ್ ಕುಮಾರ್, ಎಲೆಕ್ಟ್ರಿಷಿಯನ್ ಇವರ ರಕ್ಷಣಾ ಹೇಳಿಕೆ ದಿ: 16/11/2006.
11 ಶ್ರೀಮತಿ ಲಲಿತ, (ನಿ) ಲೇ – ಕಾರ್ಯದರ್ಶಿ (ದಿವಂಗತ)
12 ಸರ್ಕಾರಿ ಆದೇಶ ಸಂಖ್ಯೆ: ಆಕುಕ 243 ಎಂಎಸ್ಎ 2003, ದಿ: 23/04/2007
13 ವಿಚಾರಣಾಧಿಕಾರಿಗಳ ವರದಿ ದಿ: 12/03/2008.

**ಪ್ರಸ್ತಾವನೆ:**

2002–03ನೇ ಸಾಲಿನಲ್ಲಿ ಬೀದರ್ ಜಿಲ್ಲಾ ಆಸ್ಪತ್ರೆಯಲ್ಲಿ ಔಷಧಿ ಮತ್ತು ರಾಸಾಯನಿಕ ಔಷಧಿ ಖರೀದಿಯಲ್ಲಿ ಸರ್ಕಾರದ ಹಣ ದುರುಪಯೋಗ ಹಾಗೂ ಇನ್ನಿತರ ಅವ್ಯವಹಾರಗಳು ನಡೆದಿದೆ ಎಂಬುದರ ಬಗ್ಗೆ ಸದರಿ ಆಸ್ಪತ್ರೆಯ ಸಂದರ್ಶಕರ ಸಮಿತಿ ಸದಸ್ಯರಾದ ಶ್ರೀ ಪ್ರಕಾಶ್ ಘಾಳೆ ಇವರು ಸರ್ಕಾರಕ್ಕೆ ದೂರು ಸಲ್ಲಿಸಿದ್ದು, ಸದರಿ ದೂರಿನನ್ವಯ ಆರೋಗ್ಯ ಮತ್ತು ಕು.ಕ. ಇಲಾಖೆಯ ಜಾಗೃತಾಧಿಕಾರಿಗಳಿಂದ ತನಿಖೆ ನಡೆಸಿ, ವರದಿ ಪಡೆಯಲಾಗಿದ್ದು, ಸದರಿ ವರದಿಯನ್ನು ಸರ್ಕಾರವು ಪರಿಶೀಲಿಸಿ, ಹಣ ದುರುಪಯೋಗ ಹಾಗೂ ಇನ್ನಿತರೆ ಅವ್ಯವಹಾರಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಈ ಕೆಳಕಂಡ ಅಧಿಕಾರಿ/ನೌಕರರುಗಳು ಜವಾಬ್ದಾರರೆಂದು ಸರ್ಕಾರಕ್ಕೆ ಮನದಟ್ಟಾದುದರಿಂದ ಅವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್ ದಿ: 21/08/2006ರಲ್ಲಿ ದೋಷಾರೋಪಣಾ ಪಟ್ಟಿಯೊಡನೆ ಆಪಾದಿತರುಗಳಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

1) ಡಾ. ಕೆ. ಪ್ರಾಣೇಶ, ನಿವೃತ್ತ ವಿಭಾಗೀಯ ಸಹ ನಿರ್ದೇಶಕರು
2) ಡಾ. ವಿ.ಎನ್. ನಿಂಬೂರ್, ನಿವೃತ್ತ ಜಿಲ್ಲಾ ಶಸ್ತ್ರ ಚಿಕಿತ್ಸಕರು
3) ಡಾ. ಶೋಭಾ ಲ. ರಸಾಳಕರ, ನಿವೃತ್ತ ಉಪ ನಿರ್ದೇಶಕರು
4) ಶ್ರೀಮತಿ ಲಲಿತ, (ನಿವೃತ್ತ) ಲೇ–ಕಾರ್ಯದರ್ಶಿ (ದಿವಂಗತ)
5) ಶ್ರೀ ಮಹಮದ್ ಖಾಜಾ (ನಿವೃತ್ತ) ಲೇ–ಕಾರ್ಯದರ್ಶಿ
6) ಶ್ರೀ ರಘುನಾಥ, ನಿವೃತ್ತ ಕಛೇರಿ ಅಧೀಕ್ಷಕರು
7) ಶ್ರೀ ದಿಲೀಪ್ ಕುಮಾರ್, ಎಲೆಕ್ಟ್ರಿಷಿಯನ್
8) ಡಾ. ಸುಮೇಧಾ ಆರ್. ದೇಸಾಯಿ, ಪ್ರಾಂಶುಪಾಲರು
9) ಶ್ರೀ ಬಿ. ಜನಾರ್ಧನ, ಪ್ರ.ದ.ಸ.
10) ಶ್ರೀ ಶಿವಕುಮಾರ ಸ್ವಾಮಿ, ದ್ವಿ.ದ.ಸ.

ಮೇಲೆ (1) ರಿಂದ (6)ರವರೆಗಿನ ಆರೋಪಿತರುಗಳು ಈಗಾಗಲೆ ನಿವೃತ್ತಿ ಹೊಂದಿದ್ದು, ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 214 ರಡಿಯಲ್ಲಿ ಶಿಸ್ತುಕ್ರಮ ಜರುಗಿಸಲು ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ ಅನುಮತಿ ನೀಡಲಾಗಿದೆ.

ಮೇಲೆ (1)ರ ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಆಪಾದಿತ ಸರ್ಕಾರಿ ನೌಕರರುಗಳು ಮೇಲೆ (3) ರಿಂದ (10)ರವರೆಗೆ ಓದಲಾದ ಪತ್ರಗಳಲ್ಲಿ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿದ್ದಾರೆ.

ಆರೋಪಿತರುಗಳು ಸಲ್ಲಿಸಿರುವ ಈ ರಕ್ಷಣಾ ಹೇಳಿಕೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ರಕ್ಷಣಾ ಹೇಳಿಕೆಗಳಲ್ಲಿ ಆರೋಪಿತ ಅಧಿಕಾರಿಗಳು/ನೌಕರರು ನೀಡಿರುವ ಕಾರಣಗಳು ತೃಪ್ತಿಕರವಾಗಿಲ್ಲದ್ದರಿಂದ, ಶ್ರೀಮತಿ ಲಲಿತ, ನಿವೃತ್ತ ಲೇ–ಕಾರ್ಯದರ್ಶಿ ಇವರು ಈಗಾಗಲೇ ನಿಧನ ಹೊಂದಿರುವುದರಿಂದ, ಈ ಪ್ರಕರಣದಲ್ಲಿ ಸದರಿಯವರನ್ನು ಹೊರತುಪಡಿಸಿ, ಉಳಿದ ಅಧಿಕಾರಿ/ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (12)ರಲ್ಲಿ ಓದಲಾದ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಎ. ಕೃಷ್ಣಪ್ಪ, ನಂ. 12142, 8ನೇ ಮೇನ್ ಚಂದ್ರ ಲೇ–ಔಟ್, ಬೆಂಗಳೂರು–40 ಇವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಹಾಗೂ ಆಡಳಿತಾಧಿಕಾರಿ (ಸಾರಿಗೆ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಯಿತು.

ಮೇಲೆ (13)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಇಲಾಖಾ ವಿಚಾರಣೆಯಲ್ಲಿ ಹಾಜರುಪಡಿಸಲಾದ ದಾಖಲಾತಿಗಳು ಹಾಗೂ ಸಾಕ್ಷಿಗಳ ಆಧಾರದ ಮೇಲೆ ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿಲ್ಲವೆಂದು ವರದಿಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿಯನ್ನು ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಿಯಮಾನುಸಾರ ಕೈಗೊಂಡಿರುವುದು ದಾಖಲೆಗಳಿಂದ ದೃಢಪಟ್ಟಿರುವುದರಿಂದ, ಅವರು ನೀಡಿರುವ ವರದಿಯಲ್ಲಿ ಎಲ್ಲಾ ಆರೋಪಿತ ಅಧಿಕಾರಿ/ನೌಕರರುಗಳ ವಿರುದ್ಧ ಮಾಡಿರುವ ಆರೋಪವು ಸಾಬೀತಾಗಿಲ್ಲವೆಂದು ನೀಡಿರುವ ನಿರ್ಣಯವನ್ನು ಒಪ್ಪಿಕೊಂಡು, ಇವರುಗಳನ್ನು ಈ ಪ್ರಕರಣದಲ್ಲಿ ದೋಷಮುಕ್ತರನ್ನಾಗಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 241 ಎಂಎಸ್‌ಎ 2003, ಬೆಂಗಳೂರು, ದಿನಾಂಕ: 17ನೇ ಮೇ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಈ ಕೆಳಕಂಡ ಅಧಿಕಾರಿ/ನೌಕರರನ್ನು ಈ ಪ್ರಕರಣದಲ್ಲಿ ಮಾಡಿರುವ ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿ ಆದೇಶಿಸಿದೆ.

1. ಡಾ. ಕೆ. ಪ್ರಾಣೇಶ, ನಿವೃತ್ತ ವಿಭಾಗೀಯ ಸಹ ನಿರ್ದೇಶಕರು
2. ಡಾ. ವಿ.ಎನ್. ನಿಂಬೂರ್, ನಿವೃತ್ತ ಜಿಲ್ಲಾ ಶಸ್ತ್ರ ಚಿಕಿತ್ಸಕರು
3. ಡಾ. ಶೋಭಾ ಎ. ರಸಾಳಕರ, ನಿವೃತ್ತ ಉಪ ನಿರ್ದೇಶಕರು
4. ಶ್ರೀ ಮಹಮದ್ ಖಾಜಾ (ನಿವೃತ್ತ) ಲೇ–ಕಾರ್ಯದರ್ಶಿ
5. ಶ್ರೀ ರಘುನಾಥ, ನಿವೃತ್ತ ಕಛೇರಿ ಅಧೀಕ್ಷಕರು
6. ಶ್ರೀ ದಿಲೀಪ್ ಕುಮಾರ್, ಎಲೆಕ್ಟ್ರಿಷಿಯನ್
7. ಡಾ. ಸುಮೇಧಾ ಆರ್. ದೇಸಾಯಿ, ಪ್ರಾಂಶುಪಾಲರು
8. ಶ್ರೀ ಬಿ. ಜನಾರ್ಧನ, ಪ್ರ.ದ.ಸ.
9. ಶ್ರೀ ಶಿವಕುಮಾರ ಸ್ವಾಮಿ, ದ್ವಿ.ದ.ಸ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 841

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಪ್ರಾರಂಭ ಮಾಡಲ್ಪಟ್ಟ 75 ಹೊಸ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ಬಾಲಕರ/ಬಾಲಕಿಯರ ವಸತಿ ನಿಲಯಗಳಿಗಾಗಿ 388 ಹುದ್ದೆಗಳನ್ನು ಸೃಜಿಸಿರುವ ಆದೇಶವನ್ನು ಮಾರ್ಪಡಿಸಿ 376 ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007 ದಿನಾಂಕ: 1–12–2007.
2 ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರ ಪ್ರಸ್ತಾವನೆ ಸಂಖ್ಯೆ: ಸಕನಿ/ಇಡಿ 4/ಸಿಆರ್–6/2007–08 ದಿನಾಂಕ: 12–12–2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಪ್ರಾರಂಭ ಮಾಡಲ್ಪಟ್ಟ ಪರಿಶಿಷ್ಟ ಜಾತಿಯ 75 ಹೊಸ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗಾಗಿ ಒಟ್ಟು 388 ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ಪ್ರಸ್ತಾವನೆಯಲ್ಲಿ ಮಂಜೂರಾದ ವಿದ್ಯಾರ್ಥಿ ನಿಲಯಗಳನ್ನು ಸೇರ್ಪಡೆ, ಮಾರ್ಪಾಡು, ಪರಿವರ್ತನೆಯಿಂದ ಹಾಗೂ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಮಂಜೂರಾತಿ ಸಂಖ್ಯೆಯಲ್ಲಿ ವ್ಯತ್ಯಾಸವಿರುವುದರಿಂದ ಹಾಗೂ ಬಾಲಕರ ವಿದ್ಯಾರ್ಥಿ ನಿಲಯಗಳು ಬಾಲಕಿಯರ ವಿದ್ಯಾರ್ಥಿ ನಿಲಯಗಳಾಗಿ ಪರಿವರ್ತನೆ ಆದೇಶವಾಗಿರುವುದರಿಂದ ಸೃಜಿಸಿರುವ ಹುದ್ದೆಗಳಲ್ಲಿ ವ್ಯತ್ಯಾಸವಾಗಿರುತ್ತದೆ. ಆದುದರಿಂದ 388 ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಲಾಗಿರುವ ಆದೇಶವನು ಮಾರ್ಪಡಿಸಿ, 376 ಹುದ್ದೆಗಳನ್ನು ಸೃಜಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 197 ಪಕವಿ 2007, ಬೆಂಗಳೂರು ದಿನಾಂಕ: 13ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, 2007–08ನೇ ಸಾಲಿನಲ್ಲಿ ಪ್ರಾರಂಭ ಮಾಡಲ್ಪಟ್ಟ ಪರಿಶಿಷ್ಟ ಜಾತಿಯ 75 ಹೊಸ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಬಾಲಕರ/ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007 ದಿನಾಂಕ: 1–12–2007ರಲ್ಲಿ ಒಟ್ಟು 388 ಹುದ್ದೆಗಳನ್ನು ಸೃಜಿಸಲಾಗಿದ್ದ ಆದೇಶವನ್ನು ಮಾರ್ಪಡಿಸಿ ಈ ಕೆಳಕಂಡಂತೆ ಒಟ್ಟು 376 ಹುದ್ದೆಗಳನ್ನು ಸೃಜಿಸಲು ಅನುಮೋದನೆ ನೀಡಿ ಆದೇಶಿಸಿದೆ.

**ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007 ದಿನಾಂಕ: 1–12–2007ರ ಆದೇಶದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ | ಪ್ರಸ್ತುತ ಸದರಿ ಆದೇಶವನ್ನು ಮಾರ್ಪಡಿಸಿ ಮಂಜೂರು ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಮೇಲ್ವಿಚಾರಕರು | 25 | 53 |
| 2. | ಅಡಿಗೆಯವರು | 50 | 106 |
| 3. | ಅಡಿಗೆ ಸಹಾಯಕರು | 50 | 106 |
| | **ಒಟ್ಟು** | **125** | **265** |

**ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007 ದಿನಾಂಕ: 1–12–2007ರ ಆದೇಶದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ | ಪ್ರಸ್ತುತ ಸದರಿ ಆದೇಶವನ್ನು ಮಾರ್ಪಡಿಸಿ ಮಂಜೂರು ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಮೇಲ್ವಿಚಾರಕರು | 25 | 08 |
| 2. | ಅಡಿಗೆಯವರು | 50 | 16 |
| 3. | ಅಡಿಗೆ ಸಹಾಯಕರು | 50 | 16 |
| 4. | ಕಾವಲುಗಾರರು | 25 | 08 |
| | **ಒಟ್ಟು** | **150** | **48** |

**ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007 ದಿನಾಂಕ: 1–12–2007ರ ಆದೇಶದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ | ಪ್ರಸ್ತುತ ಸದರಿ ಆದೇಶವನ್ನು ಮಾರ್ಪಡಿಸಿ ಮಂಜೂರು ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಮೇಲ್ವಿಚಾರಕರು | 12 | 07 |
| 2. | ಅಡಿಗೆಯವರು | 24 | 14 |
| 3. | ಅಡಿಗೆ ಸಹಾಯಕರು | 12 | 07 |
| | **ಒಟ್ಟು** | **48** | **28** |

**ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007 ದಿನಾಂಕ: 1–12–2007ರ ಆದೇಶದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ | ಪ್ರಸ್ತುತ ಸದರಿ ಆದೇಶವನ್ನು ಮಾರ್ಪಡಿಸಿ ಮಂಜೂರು ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಮೇಲ್ವಿಚಾರಕರು | 13 | 07 |
| 2. | ಅಡಿಗೆಯವರು | 26 | 14 |
| 3. | ಅಡಿಗೆ ಸಹಾಯಕರು | 13 | 07 |
| 4. | ಕಾವಲುಗಾರರು | 13 | 07 |
| | **ಒಟ್ಟು** | **65** | **35** |

ಈ ಆದೇಶವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 843

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಮಾಜ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಅನೆಪಿ ಹೆಲೆನ್ ಡೇನಿಯಲ್, ಪ್ರಾಥಮಿಕ ಆರೋಗ್ಯ ಕೇಂದ್ರ, ಬೇತಮಂಗಲ, ಬಂಗಾರುಪೇಟೆ ತಾ: ಇವರ ರಾಜಿನಾಮೆ ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿಆರ್ಬ (1) 165:2006–07 ದಿನಾಂಕ: 05–12–2007

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಡಾ: ಅನೆಪಿ ಹೆಲೆನ್ ಡೇನಿಯಲ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಬೇತಮಂಗಲ, ಬಂಗಾರುಪೇಟೆ ತಾ: ಕೋಲಾರ ಜಿಲ್ಲೆ, ಇವರು ದಿನಾಂಕ: 23–06–2000 ರಂದು ಸರ್ಕಾರಿ ಸೇವೆಗೆ ನೇಮಕಹೊಂದಿದ್ದು, ಕೌಟುಂಬಿಕ ಕಾರಣಗಳಿಂದಾಗಿ ಸರ್ಕಾರಿ ಸೇವೆಯಲ್ಲಿ ಮುಂದುವರಿಯಲು ಸಾಧ್ಯವಾಗದ ಕಾರಣ ದಿನಾಂಕ: 16.10.2006 ರಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಗೆ ರಾಜೀನಾಮೆಯನ್ನು ಸಲ್ಲಿಸಿರುತ್ತಾರೆ. ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಇವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವೆಂದು ತಿಳಿಸುತ್ತಾ, ದಿನಾಂಕ: 16.10.2006 ರಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 161 ಹೆಚ್ಎಸ್ಹೆಚ್ 2008, ಬೆಂಗಳೂರು, ದಿನಾಂಕ 19ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಡಾ: ಅನೆಪಿ ಹೆಲನ್ ಡೇನಿಯಲ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಬೇತಮಂಗಲ, ಬಂಗಾರುಪೇಟೆ ತಾ: ಕೋಲಾರ ಜಿಲ್ಲೆ, ಇವರು ತಮ್ಮ ಸರ್ಕಾರಿ ಸೇವೆಯ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ಪೂರ್ವಾನ್ವಯವಾಗಿ ದಿನಾಂಕ: 16.10.2006 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 842

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

## ಆರ್ಥಿಕ ಸಚಿವಾಲಯ

**ವಿಷಯ:** ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸಲು ರಚಿಸಲಾದ ಹೈಪವರ್ ಕಮಿಟಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಎಫ್ಡಿ 43 ಇಎಫ್ಎಲ್ 2005, ದಿನಾಂಕ: 18–01–06
2 ತಿದ್ದುಪಡಿ ಆದೇಶ ಸಂಖ್ಯೆ: ಎಫ್ಡಿ 64 ಇಎಫ್ಎಲ್ 2004 (1), ದಿನಾಂಕ: 06–03–06
3 ಸರ್ಕಾರದ ಆದೇಶ ಸಂಖ್ಯೆ: ಎಫ್ಡಿ 09 ಇಎಫ್ಎಲ್ 2007 ದಿನಾಂಕ: 16–03–07
4 ಸರ್ಕಾರದ ಆದೇಶ ಸಂಖ್ಯೆ: ಎಫ್ಡಿ 09 ಇಎಫ್ಎಲ್ 2007 ದಿನಾಂಕ: 02–07–07
5 ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ:07:ಆರ್ಎಸ್ಎ:2007 ದಿನಾಂಕ: 07–03–08

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.03.2007ರ ಸರ್ಕಾರದ ಆದೇಶದಲ್ಲಿ ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ಹಂಚಿಕೆ ಮಾಡುವ ಸಂಬಂಧ ಅಬಕಾರಿ ಆಯುಕ್ತರ ಹಂತದಲ್ಲಿ ರಚಿಸಲಾಗಿರುವ ತಾಂತ್ರಿಕ ಉಪ ಸಮಿತಿಯು ಮಾಡುವ ಶಿಫಾರಸ್ಸುಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಪರಿಶೀಲಿಸಿ, ಪ್ರತಿ ಅರ್ಜಿಯನ್ನು ಅರ್ಹತೆಗನುಸಾರವಾಗಿ ಅಂದಿನ ಮಾನ್ಯ ಉಪ ಮುಖ್ಯಮಂತ್ರಿಯವರಿಗೆ ಅಂತಿಮ ನಿರ್ಧಾರ ಕೈಗೊಳ್ಳಲು ಶಿಫಾರಸ್ಸು ಮಾಡಲು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ದಿನಾಂಕ: 16.03.2007ರಿಂದ ಒಂದು ವರ್ಷದ ಅವಧಿಗೆ ರಚಿಸಲಾಗಿತ್ತು.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | – ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | – ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿಗಳು (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ | – ಸದಸ್ಯರು |
| 4. | ಪ್ರಾಧ್ಯಾಪಕರು, ರಾಸಾಯನಿಕ ಇಂಜಿನಿಯರಿಂಗ್ ವಿಭಾಗ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | – ಸದಸ್ಯರು |
| 5. | ಡಾ. ಎಂ.ಎಸ್. ಕಾಮತ್, ಪ್ರೋಫೇಸರ್ ಆಫ್ ಕೆಮಿಕಲ್ ಇಂಜಿನಿಯರಿಂಗ್, NIT-K, ಸೂರತ್ಕಲ್, ಮಂಗಳೂರು | – ಸದಸ್ಯರು |
| 6. | ಅಬಕಾರಿ ಆಯುಕ್ತರು, ಬೆಂಗಳೂರು | – ಸದಸ್ಯರು |
| 7. | ಸರ್ಕಾರದ ಜಂಟಿ ಕಾರ್ಯದರ್ಶಿ (ಆಡಳಿತ), ಆರ್ಥಿಕ ಇಲಾಖೆ | – ಸದಸ್ಯ ಕಾರ್ಯದರ್ಶಿ |

ಮೇಲ್ಕಂಡಂತೆ, ರಚಿಸಲಾಗಿರುವ ಉನ್ನತ ಮಟ್ಟದ ಸಮಿತಿಯ ಅವಧಿಯು ದಿನಾಂಕ: 15.03.2008ಕ್ಕೆ ಮುಕ್ತಾಯಗೊಂಡಿದ್ದರಿಂದ, ಸದರಿ ಸಮಿತಿಯ ಅವಧಿಯನ್ನು ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲು ಉಲ್ಲೇಖ (5)ರ ದಿನಾಂಕ: 07.03.2008ರ ಪತ್ರದಲ್ಲಿ ಅಬಕಾರಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ. ಅಬಕಾರಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತದೆ. ಪ್ರಸ್ತುತವಾಗಿ ರಾಜ್ಯದಲ್ಲಿ ಚುನಾಯಿತ ಸರ್ಕಾರ ಬರುವ ಹಿನ್ನೆಲೆಯಲ್ಲಿ, ಸದರಿ ಸಮಿತಿಯ ಅವಧಿಯನ್ನು ದಿನಾಂಕ: 16–03–2008 ರಿಂದ ಮೂರು ತಿಂಗಳ ಅವಧಿಗೆ ಮಾತ್ರ ವಿಸ್ತರಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 21 ಇಎಫ್‌ಎಲ್ 2008, ಬೆಂಗಳೂರು ದಿನಾಂಕ: 16ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರ ಹಂಚಿಕೆ ಮಾಡಲು ಒಂದು ಆರ್‌ಎಸ್–2 ಮತ್ತು ಡಿಎಲ್–3 ಸನ್ನದುಗಳನ್ನು ಮಂಜೂರು ಮಾಡಲು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 9 ಇಎಫ್‌ಎಲ್ 2007, ದಿನಾಂಕ: 16.03.2007 ಮತ್ತು 02.07.2007ರಲ್ಲಿ ರಚಿಸಲಾಗಿರುವ ಮೇಲ್ಕಂಡ ಸದಸ್ಯರನ್ನು ಒಳಗೊಂಡ ಉನ್ನತ ಮಟ್ಟದ ಸಮಿತಿಯ ಅವಧಿಯನ್ನು ದಿನಾಂಕ: 16.03.2008 ರಿಂದ ಮೂರು ತಿಂಗಳ ಅವಧಿಗೆ ವಿಸ್ತರಿಸಿದೆ.

ಉನ್ನತ ಮಟ್ಟದ ಸಮಿತಿಯು ರಾಸಾಯನಿಕ ಘಟಕಗಳಿಂದ ರೆಕ್ಟಿಫೈಡ್ ಸ್ಪಿರಿಟ್/ಡೀನೇಚರ್ಡ್ ಸ್ಪಿರಿಟ್ (ಮದ್ಯಸಾರ) ಹಂಚಿಕೆ ಕೋರಿ ಬರುವ ಪ್ರಸ್ತಾವನೆಗಳನ್ನು ಈ ಬಗ್ಗೆ ರಚನೆಯಾಗಿರುವ ತಾಂತ್ರಿಕ ಉಪ ಸಮಿತಿಯು ನೀಡುವ ಶಿಫಾರಸ್ಸುಗಳನ್ನು ಆಧರಿಸಿ, ಉನ್ನತ ಮಟ್ಟದ ಸಮಿತಿಯು ಪರಿಶೀಲಿಸಿ ಸದರಿ ಘಟಕಗಳಲ್ಲಿನ ಮೂಲಭೂತ ಸೌಕರ್ಯ, ಆರ್‌ಎಸ್/ಡಿಎಸ್ ಅವಶ್ಯಕತೆ ಇತ್ಯಾದಿಗಳನ್ನು ಗಮನಿಸಿ ಅರ್ಹತೆಗನುಸಾರವಾಗಿ ಮಾನ್ಯ ಸಚಿವರಿಗೆ ಶಿಫಾರಸ್ಸು ಮಾಡತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 847

**ಬಿ. ಕೋದಂಡರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಅಬಕಾರಿ)

## COMMERCE & INDUSTRIES SECRETARIAT

**Sub:** Transfer of Mining lease No. 2488 held by Shri S.A. Thwab in favour of M/s. S.A. Thwab & Company.

**Read :** Letter No. ಗಭೂಇ.ಗಗು. 2488: ವರ್ಗಾವಣೆ: 2007–08:874 dated 11.06.2007 of the Director of Mines and Geology, Bangalore

**Preamble:**

The Director of Mines and Geology, Bangalore in his letter read above has stated that Shri S.A. Thwab is holding Mining Lease No. 2488 for Iron ore, over an area of 24.72 hectares in Ramgad village, Sandur taluk, Bellary District for a period of 20 years w.e.f. 04.08.2001. The lessee has requested to transfer of Mining Lease No. 2488 in favour of M/s S.A. Thwab & Company. M/s S.A. Thwab & Company, have also agreed to take over the Mining lease on transfer as per Rule 37 of MC Rules, 1960 subject to terms and conditions of mining lease. Since both the applicants have fulfilled all the requirements as per MC Rules 1960, the Director of Mines and Geology has recommended to the Government for transfer of Mining Lease No.2488 held by Shri S.A. Thwab in favour of M/s. S.A. Thwab & Company, as per Rule 37 of M.C.Rules, 1960.

The proposal has been examined.

**Government Order No. CI.129:MMM.2007, Bangalore Dated 20th May 2008**

In the circumstances explained in the preamble, the Government are pleased to accord sanction for transfer of Mining Lease No. 2488 held by Shri S.A. Thwab in Ramgad village of Sandur taluk, Bellary District over an area of 24.72 hectares in favour M/s. S.A. Thwab & Company, for the unexpired period of the lease i.e., upto 03.08.2021 under Rule 37 (1) (a) of MCR, 1960, subject to the conditions that the transfer shall accept all the conditions and liabilities which the transferor was having in respect of the said mining lease.

By order and in the Name of the President of India

**M. VASUDEVAMURTHY**

PR. 849

Under Secretary to Government (Mines),
Commerce & Industries Department.

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ತುರುವೇಕೆರೆ ಸರ್ಕಾರಿ ಬಿತ್ತನೆ ಕೋಠಿಯ ಕಟ್ಟಡದಲ್ಲಿಯ 3 ಕೊಠಡಿಗಳನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸಲು ನೀಡುವ ಬಗ್ಗೆ.

**ಓದಲಾಗಿದೆ:** 1 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಬೀರೇಕ್ಷೆ/ರು.ಕೆರೆ/ಸಪಾಕಾ/20/07–08, ದಿನಾಂಕ: 28–9–2007, 5–1–2008.

2 ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ಸಂಖ್ಯೆ: ಡಿಟಿಇ 24 ಬಿಎಲ್‌ಡಿ 2007, ದಿ: 24–4–08.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ತುರುವೇಕೆರೆಯಲ್ಲಿ 2007–08ನೇ ಸಾಲಿನಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜನ್ನು ಪ್ರಾರಂಭಿಸಲು ಮಂಜೂರಾತಿ ದೊರಕಿದ್ದು, ತುರುವೇಕೆರೆ ಪಟ್ಟಣದಲ್ಲಿ ಪ್ರಸಕ್ತ ಈ ಕೋರ್ಸ್‌ಗಳನ್ನು ಪ್ರಾರಂಭಿಸಲು ಸದ್ಯಕ್ಕೆ ಕಟ್ಟಡಗಳಿಲ್ಲದ ಪ್ರಯುಕ್ತ ರೇಷ್ಮೆ ಇಲಾಖೆಯ ರೇಷ್ಮೆ ಬಿತ್ತನೆ ಕೋಠಿಯ ಕಟ್ಟಡದ 3 ಕೊಠಡಿಗಳನ್ನು ತಾತ್ಕಾಲಿಕವಾಗಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸಲು ನೀಡುವುದಕ್ಕೆ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯಿತಿ, ತುರುವೇಕೆರೆ ಇವರು ಕೋರಿರುವುದಾಗಿ ತಿಳಿಸಿ, ತುರುವೇಕೆರೆ ಟೌನ್ ಹೊರವಲಯದಲ್ಲಿ ಸರ್ವೆ ನಂ. 175 ರಲ್ಲಿರುವ ರೇಷ್ಮೆ ಬಿತ್ತನೆ ಕೋಠಿಯ ಕಟ್ಟಡದಲ್ಲಿಯ 3 ಕೊಠಡಿಗಳನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸುವುದಕ್ಕಾಗಿ ಕೆಲವು ಷರತ್ತುಗಳ ಮೇಲೆ ತಾತ್ಕಾಲಿಕವಾಗಿ ಹಾಗೂ ಉಚಿತವಾಗಿ ನೀಡುವ ಬಗ್ಗೆ ಸರ್ಕಾರದ ಆದೇಶವನ್ನು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕೋರಿರುತ್ತಾರೆ.

ತುಮಕೂರು ಜಿಲ್ಲೆ, ತುರುವೇಕೆರೆ ಇಲ್ಲಿ ಸರ್ಕಾರಿ ಪಾಲಿಟೆಕ್ನಿಕ್‌ನ್ನು 2007–08ನೇ ಸಾಲಿನಲ್ಲಿ ಪ್ರಾರಂಭಿಸಲು ಸರ್ಕಾರವು ಅನುಮತಿ ನೀಡಿದ್ದು, ಸೂಕ್ತ ಕಟ್ಟಡವು ದೊರಕದೇ ಇದ್ದುದ್ದರಿಂದ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ. ದಿನಾಂಕ: 1–6–2008ರಿಂದ ಪಾಲಿಟೆಕ್ನಿಕ್ ಕಾಲೇಜನ್ನು ಪ್ರಾರಂಭಿಸಬೇಕಾಗಿದೆ. ಪಾಲಿಟೆಕ್ನಿಕ್ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಾಣವಾಗುವವರೆಗೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ರೇಷ್ಮೆ ಇಲಾಖೆಯ ಬಿತ್ತನೆ ಕೋಠಿಯ ಕಟ್ಟಡದಲ್ಲಿ ಖಾಲಿ ಇರುವ ಕೊಠಡಿ ಸಂಖ್ಯೆ: 3,4 ಮತ್ತು 5 ಇವುಗಳನ್ನು ತಾತ್ಕಾಲಿಕವಾಗಿ ನೀಡುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ತುರುವೇಕೆರೆ ಸರ್ಕಾರಿ ಬಿತ್ತನೆ ಕೋಠಿಯ ಕಟ್ಟಡದಲ್ಲಿಯ ಕೊಠಡಿಗಳನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 62 ರೇಯೋವಿ 2008, ಬೆಂಗಳೂರು, ದಿನಾಂಕ: 14ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರೇಷ್ಮೆ ಇಲಾಖೆಯ ತುರುವೇಕೆರೆ ರೇಷ್ಮೆ ಬಿತ್ತನೆ ಕೋಠಿ ಕಟ್ಟಡದಲ್ಲಿಯ 3 ಕೊಠಡಿಗಳನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸುವುದಕ್ಕಾಗಿ ತಾತ್ಕಾಲಿಕವಾಗಿ ತಾಂತ್ರಿಕ ಶಿಕ್ಷಣ ಇಲಾಖೆಗೆ ಕೆಳಕಂಡ ದಾಖಲೆಗಳನ್ನು ಅಗ್ರಿಮೆಂಟ್ ರೂಪದಲ್ಲಿ ರೂ. 100/–ಕ್ಕೆ ಕಡಿಮೆ ಇರದ ಸ್ಟ್ಯಾಂಪ್ ಪೇಪರ್‌ನಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು, ಬೆಂಗಳೂರು – ಅವರೊಂದಿಗೆ ಕರಾರು ಪತ್ರ ಮಾಡಿಕೊಂಡು ಅದರಂತೆ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು ತಪ್ಪದೇ ಅನುಸರಿಸತಕ್ಕದ್ದೆಂಬ ಷರತ್ತಿನ ಮೇರೆಗೆ ಮಂಜೂರಾತಿ ನೀಡಿದೆ.

1. ಬಿತ್ತನೆ ಕೋಠಿಯ ಕೊಠಡಿ ಸಂಖ್ಯೆ 3,4 ಮತ್ತು 5 ಕೊಠಡಿಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಅಥವಾ ಕಾಲೇಜಿಗೆ ಸ್ವಂತ ಕಟ್ಟಡ ಹೊಂದುವವರೆಗೆ ಇದರಲ್ಲಿ ಯಾವುದು ಮೊದಲೋ ಆ ಅವಧಿಗೆ ಮಾತ್ರ ಉಚಿತವಾಗಿ ನೀಡಬಹುದು.

2. ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿಗೆ ಬಿಟ್ಟುಕೊಡುವ 3 ಕೊಠಡಿಗಳ ಸೂಕ್ತ ನಿರ್ವಹಣೆ (ವಿದ್ಯುತ್ ಇತ್ಯಾದಿ) ಮಾಡುವುದರ ಜೊತೆಗೆ ಕಟ್ಟಡದಲ್ಲಿ ಯಾವುದೇ ಬದಲಾವಣೆ ಮಾಡದೆ ಕಟ್ಟಡವನ್ನು ಇಲಾಖೆಗೆ ಬಿಟ್ಟುಕೊಡುವಾಗ ಕಟ್ಟಡಕ್ಕೆ ಅನಿವಾರ್ಯ ದುರಸ್ಥಿಯೊಂದಿಗೆ ಸುಣ್ಣಬಣ್ಣ ಮಾಡಿಸುವುದು.
3. ಬಿತ್ತನೆಕೋಠಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖೆಯ ಕಛೇರಿಗಳ ದೈನಂದಿನ ಕಾರ್ಯನಿರ್ವಹಣೆಗೆ ಯಾವುದೇ ತೊಂದರೆಯಾಗದಂತೆ ಕಾಲೇಜು ಕೆಲಸ ನಿರ್ವಹಿಸುವುದು.
4. ಇಲಾಖೆಯೊಂದಿಗೆ ಒಪ್ಪಂದವಾಗಿರುವ ಕಾಲಾವಧಿಯು ಮುಗಿದ ನಂತರ ಅಥವಾ ರೇಷ್ಮೆ ಅಭಿವೃದ್ದಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಈ ಕಟ್ಟಡ ಇಲಾಖೆಗೆ ಬೇಕಾಗಿದೆಯೆಂದು ತಾಂತ್ರಿಕ ಇಲಾಖಾ ನಿರ್ದೇಶಕರನ್ನು ಪತ್ರ ಮುಖೇನ ಸಂಪರ್ಕಿಸಿದಲ್ಲಿ ಕಾಲಾವಧಿಗಿಂತ ಮುಂಚಿತವಾಗಿಯೇ ಸುಸ್ಥಿತಿಯಲ್ಲಿ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡವನ್ನು ಇಲಾಖೆಗೆ ಹಸ್ತಾಂತರಿಸುವುದು.
5. ಪಾಲಿಟೆಕ್ನಿಕ್‌ಗೆ ಸ್ವಂತ ಕಟ್ಟಡ ನಿರ್ಮಾಣವಾದ ಕೂಡಲೇ ಕಟ್ಟಡವನ್ನು ಮೊದಲಿದ್ದ ಸ್ಥಿತಿಯಲ್ಲಿಯೇ ಸುವ್ಯವಸ್ಥಿತವಾಗಿ ಹಿಂದಿರುಗಿಸುವುದು.
6. ಸ್ಥಿರಾಸ್ತಿ ಚರಾಸ್ತಿ ನೀಡುವ ಬಗ್ಗೆ ಆಸ್ತಿ ರಿಜಿಸ್ಟರ್‌ನು (Property register) ಕಡ್ಡಾಯವಾಗಿ ರೇಷ್ಮೆ ಕೃಷಿ ಅಭಿವೃದ್ದಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇಟ್ಟುಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 850

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

**ವಿಷಯ:** ಚಿತ್ರದುರ್ಗದಲ್ಲಿರುವ ರೇಷ್ಮೆ ನೂಲು ಬಿಚ್ಚುವ ರೀಲಿಂಗ್ ಶೆಡ್ಡುಗಳನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿಗೆ ನೀಡುವ ಬಗ್ಗೆ.

**ಓದಲಾಗಿದೆ:** 1 ರೇಷ್ಮೆ ಕೃಷಿ ಅಭಿವೃದ್ದಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಉಕೋ/ತಾ೦1/ಚಿದು/ಸಣ/18/07–08, ದಿನಾಂಕ: 11–12–2007, 17–3–2008.
2 ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ಸಂಖ್ಯೆ: ಡಿಟಿಇ 19 ಬಿಎಲ್‌ಡಿ 2007, ದಿ: 24–4–08.

**ಪ್ರಸ್ತಾವನೆ:**

ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣ, ಚಿತ್ರದುರ್ಗದಲ್ಲಿ ರೇಷ್ಮೆ ನೂಲು ಬಿಚ್ಚಾಣಿಕೆ ಚಟುವಟಿಕೆಗಳನ್ನು ನಿರ್ವಹಿಸಲು ಯಾವುದೇ ಖಾಸಗಿ/ಸಂಸ್ಥೆಗಳು ಮುಂದೆ ಬಾರದೇ ಇರುವುದರಿಂದ ಸದರಿ ಕಟ್ಟಡವನ್ನು ಸರ್ಕಾರಿ ತಾಂತ್ರಿಕ ಶಿಕ್ಷಣ ಇಲಾಖೆಗೆ ನೀಡಬಹುದೆಂದು ರೇಷ್ಮೆ ಉಪನಿರ್ದೇಶಕರು, ಚಿತ್ರದುರ್ಗ ಇವರು ತಿಳಿಸಿರುವುದಾಗಿ ಹಾಗೂ 2007–08ನೇ ಸಾಲಿನಲ್ಲಿ ಹೊಸದಾಗಿ ಆರಂಭವಾಗುವ ತಾಂತ್ರಿಕ ಕಾಲೇಜು ನಡೆಸಲು ಸಂಕೀರ್ಣದಲ್ಲಿರುವ ರೀಲಿಂಗ್ ಶೆಡ್‌ಗಳನ್ನು ಹಸ್ತಾಂತರಿಸುವಂತೆ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಹಾಗೂ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಕೋರಿರುವುದರಿಂದ ಸದರಿ ಸಂಕೀರ್ಣದ ಕಟ್ಟಡವನ್ನು ತಾಂತ್ರಿಕ ಶಿಕ್ಷಣ ಇಲಾಖೆಗೆ ಕಾಲೇಜು ಪ್ರಾರಂಭಿಸುವುದಕ್ಕೆ ಕೆಲವು ಷರತ್ತಿಗೊಳಪಟ್ಟು ಆದೇಶ ನೀಡುವುದಕ್ಕೆ ಅನುಮತಿ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜನ್ನು 2007–08ನೇ ಸಾಲಿನಲ್ಲಿ ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡಿದ್ದು, ಕಾಲೇಜು ನಡೆಸಲು ಸೂಕ್ತವಾದ ಕಟ್ಟಡ ದೊರಕದೇ ಇದ್ದುದ್ದರಿಂದ ಪ್ರಾರಂಭಿಸಲಾಗಿರುವುದಿಲ್ಲ. ದಿನಾಂಕ: 1–6–2008 ರಿಂದ ಪಾಲಿಟೆಕ್ನಿಕ್‌ನ್ನು ಪ್ರಾರಂಭಿಸಬೇಕಾಗಿದ್ದು, ರೇಷ್ಮೆ ಇಲಾಖೆಯ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡವನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸುವುದಕ್ಕೆ ತಾತ್ಕಾಲಿಕವಾಗಿ ನೀಡುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಕೋರಿರುವಂತೆ ಹಾಗೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ, ಚಿತ್ರದುರ್ಗದಲ್ಲಿರುವ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿರುವ ಶೆಡ್‌ಗಳನ್ನು ಸರ್ಕಾರಿ ಪಾಲಿಟೆಕ್ನಿಕ್‌ಗೆ ನೀಡುವ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜನ್ನು ಪ್ರಾರಂಭಿಸುವುದಕ್ಕಾಗಿ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡವನ್ನು ತಾತ್ಕಾಲಿಕವಾಗಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 01 ರೇಯೋವಿ 2008, ಬೆಂಗಳೂರು, ದಿನಾಂಕ: 14ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರೇಷ್ಮೆ ಇಲಾಖೆಯ ಚಿತ್ರದುರ್ಗದ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿರುವ ರೀಲಿಂಗ್ ಶೆಡ್‌ಗಳನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸುವುದಕ್ಕಾಗಿ ತಾತ್ಕಾಲಿಕವಾಗಿ ತಾಂತ್ರಿಕ ಶಿಕ್ಷಣ ಇಲಾಖೆಗೆ

ಕೆಳಕಂಡ ದಾಖಲೆಗಳನ್ನು ಅಗ್ರಿಮೆಂಟ್ ರೂಪದಲ್ಲಿ ರೂ. 100/– ಕ್ಕೆ ಕಡಿಮೆ ಇರದ ಸ್ಟ್ಯಾಂಪ್ ಪೇಪರ್‌ನಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು, ಬೆಂಗಳೂರು–ಅವರೊಂದಿಗೆ ಕರಾರು ಪತ್ರ ಮಾಡಿಕೊಂಡು ಅದರಂತೆ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು ತಪ್ಪದೇ ಅನುಸರಿಸತಕ್ಕದ್ದೆಂಬ ಷರತ್ತಿನ ಮೇರೆಗೆ ಮಂಜೂರಾತಿ ನೀಡಿದೆ.

1. ಇಲಾಖೆಯ ಕಟ್ಟಡವನ್ನು ತಾತ್ಕಾಲಿಕವಾಗಿ 05 ವರ್ಷಗಳ ಅವಧಿಯವರೆಗೆ ತಾಂತ್ರಿಕ ಶಿಕ್ಷಣ ಕಾಲೇಜಿಗೆ ನೀಡಲಾಗಿರುತ್ತದೆ.
2. ಇಲಾಖೆಯ ಹಾಲಿ ಕಟ್ಟಡವನ್ನು ತಾಂತ್ರಿಕ ಶಿಕ್ಷಣ ಕಾಲೇಜಿಗೆ ಬೇಕಾಗುವ ರೀತಿಯಲ್ಲಿ ಮಾರ್ಪಡಿಸಬೇಕಾದಲ್ಲಿ ಇಲಾಖೆಯ ಅನುಮತಿ ಪಡೆಯುವುದು ಹಾಗೂ ಕಟ್ಟಡದ ದುರಸ್ತಿ ವೆಚ್ಚವನ್ನು ಶಿಕ್ಷಣ ಇಲಾಖೆಯೇ ಭರಿಸುವುದು.
3. ಹೊಸದಾಗಿ ವಿದ್ಯುತ್ ಸಂಪರ್ಕವನ್ನು ಕಲ್ಪಿಸಬೇಕಾಗಿದ್ದಲ್ಲಿ ಭರಿಸಬೇಕಾದ ಮೊತ್ತ ಹಾಗೂ ಪ್ರತಿ ಮಾಹೆಯ ವಿದ್ಯುತ್ ವೆಚ್ಚವನ್ನು ತಾಂತ್ರಿಕ ಶಿಕ್ಷಣ ಇಲಾಖೆಯವರೇ ಭರಿಸುವುದು.
4. ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡವನ್ನು ತಾಂತ್ರಿಕ ಶಿಕ್ಷಣ ಕಾಲೇಜು ನಡೆಸಲು ಮಾತ್ರ ಉಪಯೋಗಿಸುವುದು. ಬೇರೆ ಕಛೇರಿಗಳಿಗೆ ಅಥವಾ ಬೇರೆ ಚಟುವಟಿಕೆಗಳನ್ನು ನಡೆಸುವುದು ಕಂಡು ಬಂದಲ್ಲಿ ತಕ್ಷಣವೇ ಯಾವುದೇ ನೋಟೀಸ್ ನೀಡದೆ ಇಲಾಖೆಯ ವಶಕ್ಕೆ ತೆಗೆದುಕೊಳ್ಳಲಾಗುವುದು.
5. ಪರಿಸರ ಮಾಲಿನ್ಯ, ವಾಯು ಮಾಲಿನ್ಯಗಳನ್ನು ಗಮನದಲ್ಲಿಟ್ಟುಕೊಂಡು ಕಟ್ಟಡಕ್ಕೆ ಯಾವುದೇ ಹಾನಿಯಾಗದ ರೀತಿಯಲ್ಲಿ ಸ್ವಚ್ಛವಾಗಿ ಇಟ್ಟುಕೊಳ್ಳುವುದು.
6. ಇಲಾಖೆಯೊಂದಿಗೆ ಒಪ್ಪಂದವಾಗಿರುವ ಕಾಲಾವಧಿಯು ಮುಗಿದ ನಂತರ ಅಥವಾ ರೇಷ್ಮೆ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಈ ಕಟ್ಟಡ ಇಲಾಖೆಗೆ ಬೇಕಾಗಿದೆಯೆಂದು ತಾಂತ್ರಿಕ ಇಲಾಖಾ ನಿರ್ದೇಶಕರನ್ನು ಪತ್ರ ಮುಖೇನ ಸಂಪರ್ಕಿಸಿದಲ್ಲಿ ಕಾಲಾವಧಿಗಿಂತ ಮುಂಚಿತವಾಗಿಯೇ ಸುಸ್ಥಿತಿಯಲ್ಲಿ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡವನ್ನು ಇಲಾಖೆಗೆ ಹಸ್ತಾಂತರಿಸುವುದು.
7. ಪಾಲಿಟೆಕ್ನಿಕ್ ಸ್ವಂತ ಕಟ್ಟಡ ನಿರ್ಮಾಣವಾದ ಕೂಡಲೇ ಕಟ್ಟಡವನ್ನು ಮೊದಲಿದ್ದ ಸುಸ್ಥಿತಿಯಲ್ಲಿಯೇ ಸುವ್ಯವಸ್ಥಿತವಾಗಿ ಹಿಂದಿರುಗಿಸುವುದು.
8. ಸ್ಥಿರಾಸ್ತಿ/ಚರಾಸ್ತಿ ನೀಡುವ ಬಗ್ಗೆ ಆಸ್ತಿ ರಿಜಿಸ್ಟರ್‌ನ್ನು (Property Register) ಕಡ್ಡಾಯವಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇಟ್ಟುಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 851

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

**ವಿಷಯ:** ಶ್ರೀ ರೇಣುಕಾ ಶುಗರ್ಸ್ (ಲಿ), ಹವಳಗಾ ಅಫಜಲ್‌ಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿ: 11.09.07.
2 ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/86/ 2005–06 ದಿನಾಂಕ: 29.09.2007.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ರೇಣುಕಾ ಶುಗರ್ಸ್ (ಲಿ), ಹವಳಗಾ, ಅಫಜಲಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 132 ಎಸ್‌ಜಿಎಫ್ 07 ಬೆಂಗಳೂರು, ದಿನಾಂಕ: 26ನೇ ಮೇ 2008**

ಶ್ರೀ ರೇಣುಕಾ ಶುಗರ್ಸ್ (ಲಿ), ಹವಳಗಾ, ಅಫಜಲ್‌ಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ

| | | | | |
|---|---|---|---|---|
| 3 | Raichur | 126.13 | | 126.13 |
| 4 | Sagalkot | 25.10 | | 25.10 |
| 5 | Selgaum | 158.10 | 65.30 | 92.80 |
| 6 | Uttara Kannada | 8.00 | | 8.00 |
| 7 | Dharwad | 47.00 | 21.00 | 26.00 |
| 8 | Koppal | 93.40 | 8.00 | 85.40 |
| 9 | Gadag | 13.00 | 13.00 | |
| 10 | Sellary | 55.99 | 55.99 | |
| 11 | Davanagere | 15.66 | 15.66 | |
| 12 | Hassan | 64.70 | 31.10 | 33.60 |
| 13 | Mysore | 100.70 | | 100.70 |
| 14 | Tumkur | 276.90 | 150.80 | 126.10 |
| 15 | Mandya | 79.40 | 75.00 | 4.40 |
| 16 | Chikkaballapur | 86.60 | 25.60 | 61.00 |
| 17 | Sangalore Rural | 23.00 | 23.00 | |
| 18 | Kolar | 31.20 | | 31.20 |
| 19 | Dakshina Kannada | 35.40 | 35.40 | |
| 20 | Haven | 32.00 | 32.00 | |
| 21 | Shimoga | 32.30 | | 32.30 |
| **Total Length in Kms** | | **1447.33** | **584.54** | **862.79** |

**M. DEVIPRASAD**
Under Secretary to Government
Public Works, Ports & IWT
Department (EAP)

PR-560

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಪುತ್ತೂರು ತಾಲ್ಲೂಕಿನ ಉಪ್ಪಿನಂಗಡಿ ಕಡಬ-ಸುಬ್ರಮಣ್ಯ ಬಿಸ್ಲೇ ರಸ್ತೆ (ರಾಜ್ಯ ಹೆದ್ದಾರಿ-113ರ) ಅಭಿವೃದ್ಧಿ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ ಸಂಖ್ಯೆ.ಮುಇಂ:ಸಂಕದ:ರಶಾ:ಸಇಂ4: 2007-08 ಪುತ್ತೂರು ತಾ:ಉಪ್ಪಿನಂಗಡಿ ಸುಬ್ರಮಣ್ಯ ರಸ್ತೆ ದಿನಾಂಕ 12-12-2007.

**ಪ್ರಸ್ತಾವನೆ:**

1. ಪುತ್ತೂರು ತಾಲ್ಲೂಕಿನಲ್ಲಿ ಹಾದು ಹೋಗುವ 32.80 ಕಿಮೀ. ಉದ್ದದ ರಾಜ್ಯ ಹೆದ್ದಾರಿ-113 ಒಂದು ಮುಖ್ಯ ರಾಜ್ಯ ಹೆದ್ದಾರಿಯಾಗಿರುತ್ತದೆ. ಈ ರಾಜ್ಯ ಹೆದ್ದಾರಿಯು ಉಪ್ಪಿನಂಗಡಿ ಬಳಿ ರಾಷ್ಟ್ರೀಯ ಹೆದ್ದಾರಿ-48ರ ಸರಪಳಿ 298.00 ಕಿಮೀ. ನಿಂದ ಪ್ರಾರಂಭಗೊಂಡು ಉಪ್ಪಿನಂಗಡಿ, ಭಜತೂರು, ರಾಮಕುಂಜ, ಕುಂತೂರು ಪೆರಬೆ, ಬಾಳ್ಯ, ಕುಂತ್ರುಪಾಡಿ, ಬಾಂತ್ರಾ ಮೂಲಕ ಹಾಯ್ದು ಮರ್ದಾಳ ಬಳಿ ಸುಬ್ರಮಣ್ಯ-ಉಡುಪಿ (ರಾಜ್ಯ ಹೆದ್ದಾರಿ-37) ರಸ್ತೆಯ ಸರಪಳಿ 17.60 ಕಿಮೀ.ನಲ್ಲಿ ಸೇರುತ್ತದೆ ಹಾಗೂ ಶ್ರೀಕ್ಷೇತ್ರ ಕುಕ್ಕೆ ಶ್ರೀ ಸುಬ್ರಮಣ್ಯಕ್ಕೆ ಸಂಪರ್ಕ ಕಲ್ಪಿಸುತ್ತದೆ. ಸಧ್ಯಕ್ಕೆ ಸದರಿ ರಸ್ತೆಯು ಶ್ರೀಕ್ಷೇತ್ರ ಕುಕ್ಕೆ ಸುಬ್ರಮಣ್ಯ ಹಾಗೂ ಧರ್ಮಸ್ಥಳ ಕ್ಷೇತ್ರಕ್ಕೆ ಒಂದು ಸಂಪರ್ಕ ರಸ್ತೆಯಾಗಿದೆ.

2. ಈ ಎರಡೂ ಪುಣ್ಯಕ್ಷೇತ್ರಗಳಿಗೆ ದೇಶದ ನಾನಾ ಭಾಗಗಳಿಂದ ಸಾವಿರಾರು ಜನ ಯಾತ್ರಾರ್ಥಿಗಳು ಪ್ರತಿವರ್ಷ ಭೇಟಿ ನೀಡುತ್ತಾರೆ. ಸದರಿ ರಸ್ತೆಯು ಈಗ ಕೇವಲ ಒಂದು ಪಥದ ರಸ್ತೆಯಾಗಿದ್ದು, 3.00 ಮೀ. ಅಗಲದ ಕ್ಯಾರೇಜ್‌ವೇ

ಹೊಂದಿರುತ್ತದೆ. ಆದ್ದರಿಂದ ಈ ರಸ್ತೆಯ ಸರಪಳಿ 5 ಕಿಮೀ. ನಿಂದ 10.80 ಕಿಮೀ.ವರೆಗೆ ಮತ್ತು 27.00 ಕಿಮೀ. ನಿಂದ 32.80 ಕಿಮೀ.ವರೆಗೆ ಸದರಿ ರಸ್ತೆಯನ್ನು ಮಧ್ಯಮ ಪಥದ ರಸ್ತೆ ಅಂದರೆ 5.50ಮೀ. ಅಗಲದ ಕ್ಯಾರೇಜ್‌ವೇಗೆ ವಿಸ್ತರಿಸಲು ಅಭಿವೃದ್ಧಿ ಕಾಮಗಾರಿಗಳನ್ನು ಯೋಜಿಸಲಾಗಿದೆ. ಅಲ್ಲದೇ ಸದರಿ ರಸ್ತೆಯ ಸರಪಳಿ 0.00 ಕಿಮೀ.ನಿಂದ 5.00 ಕಿಮೀ.ವರೆಗೆ ಈ ಹಿಂದೆ (2002-03ನೇ ಸಾಲಿನಲ್ಲಿ) ಸಿ.ಆರ್.ಎಫ್.ಯೋಜನೆಯಡಿ ಅಭಿವೃದ್ಧಿ ಪಡಿಸಲಾಗಿದ್ದು, ಈಗ ಎಸ್.ಡಿ.ಬಿ.ಸಿ. ಡಾಂಬರಿನ ಪದರವನ್ನು ಹಾಕಲು ಮೇಲಿನ ಕಾಮಗಾರಿಯಲ್ಲಿ ಅವಕಾಶ ಕಲ್ಪಿಸಿಕೊಳ್ಳಲಾಗಿದೆ.

3. ಮೇಲಿನ ಕಾಮಗಾರಿಯ ಅಂದಾಜಿನಲ್ಲಿ ಕೆಳಕಂಡ ಪ್ರವದಾನಗಳನ್ನು ಅಳವಡಿಸಲು ಅವಕಾಶವನ್ನು ಕಲ್ಪಿಸಲಾಗಿದೆ.

| | | | |
|---|---|---|---|
| i) | ಮಣ್ಣು ಅಗೆತ, ತಳ ಮತ್ತು ಮೇಲ್ಮೈ ಹಾಗೂ ಡಾಂಬರೀಕರಣ ಕಾಮಗಾರಿಗಾಗಿ | - | ರೂ.7.26 ಕೋಟಿಗಳು |
| ii) | ಕಿಮೀ.ಸ್ಟೋನ್ಸ್, ಹೆಕ್ಟೋಮೀಟರ್ ಸ್ಟೋನ್ಸ್, ಪೈಪ್ ಮೋರಿ ಮತ್ತು ಸ್ಲ್ಯಾಬ್ ಮೋರಿಗಳ ನಿರ್ಮಾಣ, ಟೆಂಡರ್‌ಪ್ರೀಮಿಯಂ, ಗುಣನಿಯಂತ್ರಣಕ್ಕಾಗಿ ನಾಮಫಲಕ ಮತ್ತು ಸೂಚನಾ ಫಲಕ ಅಳವಡಿಕೆ ವಿದ್ಯುತ್ ಮತ್ತು ಟೆಲಿಫೋನ್ ಕಂಬಗಳನ್ನು ಸ್ಥಳಾಂತರಿಸುವುದು ಮತ್ತು ಇತರೆ | - | ರೂ.2.24 ಕೋಟಿಗಳು |
| | **ಒಟ್ಟು** | - | **ರೂ.9.50 ಕೋಟಿಗಳು** |

4. ಸದರಿ ಕಾಮಗಾರಿಯ ಅಂದಾಜನ್ನು 2007-08 ನೇ ಸಾಲಿನ ಲೋಕೋಪಯೋಗಿ ವೃತ್ತ, ಮಂಗಳೂರು ದರಸೂಚಿ ಅನ್ವಯ ತಯಾರಿಸಲಾಗಿದೆ. ಈ ಕಾಮಗಾರಿಯನ್ನು 2007-08ನೇ ಸಾಲಿನ ಆಯವ್ಯಯ ಅಪೆಂಡಿಕ್ಸ್ 'ಇ' ನಲ್ಲಿ ಲೆಕ್ಕಶೀರ್ಷಿಕೆ '5054-ಇತರೆ' ರಸ್ತೆಗಳಡಿ ಸೇರಿಸಲಾಗಿದ್ದು, ರೂ.285.00 ಲಕ್ಷಗಳ ಬಜೆಟ್ ಅಂದಾಜು ಒದಗಿಸಲಾಗಿದೆ.

5. 2007ನೇ ಸಾಲಿನಲ್ಲಿನ ಟ್ರಾಫಿಕ್ ಸೆನ್ಸಸ್ ವರದಿಯಂತೆ, ಸದರಿ ರಸ್ತೆಯ ವಾಹನ ಸಂಚಾರದ ತೀವ್ರತೆ 5883.00 ಎಂ.ಟಿ.ಗಳಾಗಿದ್ದು, ಪಿ.ಸಿ.ಯು 2731.50 ಆಗಿರುತ್ತದೆ.

6. ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ.ಲೋಇ 218 ಇಎಪಿ 2007 ಬೆಂಗಳೂರು ದಿ:28ನೇ ಮಾರ್ಚ್ 2008**

ಉಪ್ಪಿನಂಗಡಿ-ಕಡಬ-ಸುಬ್ರಮಣ್ಯ-ಬಿಸ್ಲೆ ರಸ್ತೆಯ (ರಾಜ್ಯ ಹೆದ್ದಾರಿ-113) ಅಭಿವೃದ್ಧಿ ಕಾಮಗಾರಿಯ ರೂ.950.00 (ಒಂಬೈನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಲಕ್ಷಗಳ ಅಂದಾಜಿಗೆ "ಲೆಕ್ಕ ಶೀರ್ಷಿಕೆ 5054 ಇತರೆ ರಸ್ತೆಗಳ" ಅಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಲೋಇ 103 ಆಕೋ-3/2008 ದಿನಾಂಕ 12-03-2008ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 585

**ಎಂ.ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ

ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಶ್ರೀ ವಿ. ಲಕ್ಷ್ಮಣ್, ಜವಳಿ ತನಿಖಾಧಿಕಾರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರನ್ನು ಅಮಾನತ್ತಿನಿಂದ ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್ನೇಮಕ (Reinstate) ಮಾಡಿಕೊಳ್ಳುವ ಬಗ್ಗೆ

**ಓದಲಾಗಿದೆ:** 1 ಜವಳಿ ಅಭಿವೃದ್ಧಿ ಆಯುಕ್ತರ ಕಛೇರಿ ಆದೇಶ ಸಂಖ್ಯೆ: ಇ:ಆ:ಸಿ:ಸಿ:4:70:2006–07 ದಿನಾಂಕ 10.04.2006

2 ಸರ್ಕಾರದ ಆದೇಶ ಸಂಖ್ಯೆ: ವಾಕೈ 21 ಜಕೈಇ 06 ದಿನಾಂಕ 28.10.2006.

**ಪ್ರಸ್ತಾವನೆ:**

ಜವಳಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಆದೇಶದಲ್ಲಿ (1)ರಲ್ಲಿ ಶ್ರೀ ವಿ. ಲಕ್ಷ್ಮಣ್, ಜವಳಿ ತನಿಖಾಧಿಕಾರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರು ಸಹಾಯಧನ ಅರ್ಜಿಗಳನ್ನು ಕಾನೂನು ರೀತಿಯಲ್ಲಿ ಪರಿಶೀಲಿಸದೇ ಸರ್ಕಾರಿ ಕೆಲಸದಲ್ಲಿ ನಿರ್ಲಕ್ಷ್ಯ ತೋರಿಸಿರುವುದು ಹಾಗೂ ನೇಕಾರ ಫಲಾನುಭವಿಗಳಿಗೆ ಸಂದಾಯವಾಗಬೇಕಿದ್ದ ಸಹಾಯಧನವನ್ನು ವಂಚನೆಯಿಂದ ದುರುಪಯೋಗಪಡಿಸಿಕೊಳ್ಳುವಲ್ಲಿ ಭಾಗಿಯಾಗಿರುವುದು ಲಭ್ಯ ಸಾಕ್ಷಿ ಹಾಗೂ ಪುರಾವೆಗಳಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 1957 (ಸಿಸಿಎ)ರ ನಿಯಮ 10 (1) ಅಡಿಯಲ್ಲಿ ಆರೋಪದ ಮೇರೆಗೆ ಶಿಸ್ತಿನ ವಿಚಾರಣೆಯನ್ನು ಕಾಯ್ದಿರಿಸಿ ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರುತ್ತಾರೆ.

ಅಮಾನತ್ತಿನಲ್ಲಿಟ್ಟು ಆರು ತಿಂಗಳುಗಳಿಗೂ ಮೇಲ್ಪಟ್ಟಿರುವುದರಿಂದ ಪ್ರಕರಣವನ್ನು ಪುನರ್ ಪರಿಶೀಲಿಸಿದ ಸರ್ಕಾರವು ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮಗಳನ್ನು ಬಾಕಿಯಿಟ್ಟು ಅಮಾನತ್ತನ್ನು ಹಿಂತೆಗೆದುಕೊಂಡು ಕೆಲಸದ ಮೇಲೆ ಪುರ್ನನೇಮಕ ಮಾಡಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 61 ಜಕೈಸೇ 2006, ಬೆಂಗಳೂರು ದಿನಾಂಕ 27ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ, ಸರ್ಕಾರವು ಕರ್ನಾಟಕ ಸರ್ಕಾರಿ ಸೇವಾ (ಸಿ.ಸಿ. ಮತ್ತು ಎ) ನಿಯಮಾವಳಿ 1957ರ ನಿಯಮ 10ರ ಉಪನಿಯಮ 5(ಸಿ)ಯಲ್ಲಿ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸಿ, ಸರ್ಕಾರವು ಶ್ರೀ ವಿ. ಲಕ್ಷ್ಮಣ್, ಜವಳಿ ತನಿಖಾಧಿಕಾರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರ ವಿರುದ್ಧ ಶಿಸ್ತು ಕ್ರಮಗಳನ್ನು ಬಾಕಿಯಿಟ್ಟು, ತಕ್ಷಣದಿಂದಲೇ ಜಾರಿಗೆ ಬರುವಂತೆ ಅಮಾನತ್ತನ್ನು ಹಿಂತೆಗೆದುಕೊಂಡು ಕೆಲಸದ ಮೇಲೆ ಪುರ್ನನೇಮಕ (Reinstate) ಮಾಡಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 873

**ಸಿ. ರವಿಕುಮಾರ್**
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಯ ಕಛೇರಿಗೆ ಚದಲಪುರ ಸರ್ಕಾರಿ ಮಾದರಿ ಬಿತ್ತನೆ ಕೋಠಿಯ ಕಟ್ಟಡವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಬೀರೇಕ್ಷೇ/ಸಬಿಕೋ/ಚ.ಪುರ/14/2007–08, ದಿನಾಂಕ: 16–10–2007 ಹಾಗೂ 1–3–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಚಿಕ್ಕಬಳ್ಳಾಪುರದ ಚದಲಪುರ ಗ್ರಾಮದಲ್ಲಿ ರೇಷ್ಮೆ ಇಲಾಖೆಯ ಮಾದರಿ ಬಿತ್ತನೆ ಕೋಠಿಯು ಕಾರ್ಯನಿರ್ವಹಿಸುತ್ತಿರುವುದಾಗಿ ಚಿಕ್ಕಬಳ್ಳಾಪುರ ನೂತನ ಜಿಲ್ಲೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಜಿಲ್ಲಾಧಿಕಾರಿಯವರು ಚದಲಪುರ ಬಿತ್ತನೆ ಕೋಠಿ ಕಟ್ಟಡದ ಮೊದಲನೇ ಮಹಡಿಯನ್ನು ಸಂಪೂರ್ಣವಾಗಿ ಜಿಲ್ಲಾಧಿಕಾರಿಗಳ ಕಛೇರಿಗೆ ಹಾಗೂ 2 ಮತ್ತು 3ನೇ ಮಹಡಿಯ ಪಶ್ಚಿಮಾರ್ಧ ಭಾಗವನ್ನು ಜಿಲ್ಲಾ ಪಂಚಾಯತ್ ಕಛೇರಿಗೆ, ಶಾಶ್ವತವಾಗಿ ಕಟ್ಟಡಗಳ ವ್ಯವಸ್ಥೆ ಆಗುವವರೆಗೆ ಬಿಟ್ಟುಕೊಡುವಂತೆ ಕೋರಿರುವುದಾಗಿ ತಿಳಿಸಿ, ಚದಲಪುರ ಬಿತ್ತನೆ ಕೋಠಿಯ ಕಟ್ಟಡದ ಪಾರ್ಶ್ವ ಭಾಗವನ್ನು ತಾತ್ಕಾಲಿಕವಾಗಿ ನೂತನ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಗೆ ಬಿಟ್ಟುಕೊಡಲು ಉದ್ದೇಶಿಸಿದ್ದು, ಬಿತ್ತನೆಕೋಠಿಯ ಆವರಣದಲ್ಲಿ ಖಾಲಿ ಇದ್ದ ರೇಷ್ಮೆ ಉಪ ನಿರ್ದೇಶಕರು ಹಾಗೂ ಪತ್ರಾಂಕಿತ ಅಧಿಕಾರಿಗಳ ವಸತಿ ಗೃಹಗಳಿಗೆ ಬಿತ್ತನೆ ಕೋಠಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಉಪನಿರ್ದೇಶಕರ ಕಛೇರಿ ವಿಭಾಗೀಯ ಕಛೇರಿ ಹಾಗೂ ತಾಂತ್ರಿಕ ಸೇವಾ ಕೇಂದ್ರ ಕಛೇರಿಗಳನ್ನು ಸ್ಥಳಾಂತರಿಸಿ ಬಿತ್ತನೆ ಕೋಠಿಯ ಚಟುವಟಿಕೆಗಳನ್ನು ಬಿತ್ತನೆ ಕೋಠಿಯ ಕಟ್ಟಡದಲ್ಲಿಯೇ ನಿರ್ವಹಿಸಲು ವ್ಯವಸ್ಥೆ ಮಾಡಿ, ಸರ್ಕಾರಿ ಬಿತ್ತನೆ ಕೋಠಿಯ ಕಟ್ಟಡದಲ್ಲಿ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಪಂಚಾಯತ್ ಆಡಳಿತ ಕಛೇರಿಯನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ನಿರೀಕ್ಷಿಸಿ ಅನುವು

ಮಾಡಿಕೊಡಲಾಗಿದೆ ಎಂದು ತಿಳಿಸಿ, ಈ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಅಲ್ಲದೆ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಇವರು ಸದರಿ ಬಿತ್ತನೆ ಕೋಠಿ ಕಟ್ಟಡದಲ್ಲಿ ಈ ಕೆಳಕಂಡ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಅನುಮತಿ ನೀಡುವಂತೆ ಕೋರಿರುವುದಾಗಿ ತಿಳಿಸಿರುತ್ತಾರೆ.

1. ರೇಷ್ಮೆ ಇಲಾಖೆಯ ಕಟ್ಟಡದ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹದಲ್ಲಿ ಕ್ಯಾಂಟೀನ್ ಪ್ರಾರಂಭಿಸಲು ಅನುಮತಿ. ಕ್ಯಾಂಟೀನ್ ಪ್ರಾರಂಭಿಸಲು ನಿಯಮಾನುಸಾರ ಕ್ರಮಗಳನ್ನು ಜರುಗಿಸಲಾಗುವುದು. ಹಾಗೂ ಇದರಿಂದ ಬರುವ ಬಾಡಿಗೆಯನ್ನು ಸರ್ಕಾರಕ್ಕೆ ಜಮಾ ಮಾಡಲು ಕ್ರಮ ವಹಿಸಲಾಗುವುದು.
2. ಬಿತ್ತನೆ ಕೋಠಿ ಕಟ್ಟಡದಲ್ಲಿ ಪವರ್ ಲಿಫ್ಟ್ ಅಳವಡಿಸಲು ಸ್ಥಳಾವಕಾಶ ಕಲ್ಪಿಸಲಾಗಿದ್ದು ಪವರ್ ಲಿಫ್ಟ್ ಅಳವಡಿಸಲು ಅನುಮತಿ.
3. ಉಪ ನಿರ್ದೇಶಕರು, ರೇಷ್ಮೆ ಇಲಾಖೆ ಇವರ ಹಾಲಿ ಇರುವ ಕಛೇರಿಯನ್ನು ಮುಖ್ಯ ಕಟ್ಟಡದ ಮೂರನೇ ಅಂತಸ್ತಿನಲ್ಲಿರುವ ಎಡ ಭಾಗದ ಕಟ್ಟಡಕ್ಕೆ ಸ್ಥಳಾಂತರಿಸಿ ಖಾಲಿಯಾಗುವ ವಸತಿ ಗೃಹವನ್ನು (ಕಛೇರಿಯನ್ನು) ತಾತ್ಕಾಲಿಕವಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅಧಿಕೃತ ನಿವಾಸವನ್ನಾಗಿ ಮಾಡಿಕೊಳ್ಳಲು ಅನುಮತಿ.
4. ಮೂಲ ಕಟ್ಟಡದ ಮೂರನೇ ಅಂತಸ್ತಿನಲ್ಲಿ ಉಪ ನಿರ್ದೇಶಕರ ಕಛೇರಿಗೆ ಸ್ಥಳಾವಕಾಶ ಮಾಡಿಕೊಂಡ ನಂತರ ಉಳಿದ ಭಾಗವನ್ನು ಜಿಲ್ಲಾ ಪಂಚಾಯತ್ ಕಾರ್ಯಾಲಯಕ್ಕೆ ಉಪಯೋಗಿಸಿಕೊಳ್ಳಲು ಅನುಮತಿ.

ಮುಖ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರು ಕೋರಿರುವ ಮೇಲಿನ ಕ್ರಮ ಸಂಖ್ಯೆ 1,2 ಹಾಗೂ 3ರ ಅಂಶಗಳಿಗೆ ಅನುಮತಿ ನೀಡಬಹುದೆಂದು ಹಾಗೂ ಕ್ರಮ ಸಂಖ್ಯೆ 4ರ ಬಗ್ಗೆ ಸ್ಥಳಾವಕಾಶವಿಲ್ಲದ ಕಾರಣ ಪೂರ್ಣ ಕಟ್ಟಡವು ಇಲಾಖೆಯ ಉಪಯೋಗಕ್ಕಾಗಿ ಅವಶ್ಯಕವಿರುವುದಾಗಿ ತಿಳಿಸಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯ ಹಿನ್ನಲೆಯಲ್ಲಿ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 35 ರೇಯೋವಿ 2007, ಬೆಂಗಳೂರು, ದಿನಾಂಕ: 27ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಚದಲಪುರ ರೇಷ್ಮೆ ಬಿತ್ತನೆ ಕೋಠಿಯ ಕಟ್ಟಡದ ಬಗ್ಗೆ ತಾತ್ಕಾಲಿಕವಾಗಿ ಈ ಕೆಳಗಿನಂತೆ ಕ್ರಮ ಕೈಗೊಳ್ಳುವುದಕ್ಕೆ ಮಂಜೂರಾತಿ ನೀಡಿದೆ.

1. ರೇಷ್ಮೆ ಇಲಾಖೆಯ ಈ ಕಟ್ಟಡದ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹದಲ್ಲಿ ಕ್ಯಾಂಟೀನ್ ಪ್ರಾರಂಭಿಸಲು ಈ ಕೆಳಗಿನ ಷರತ್ತಿಗೊಳಪಟ್ಟು ಅನುಮತಿ
   (i) ಲೋಕೋಪಯೋಗಿ ಇಲಾಖೆಯ ಸ್ಥಳೀಯ ಕಾರ್ಯಪಾಲಕ ಅಭಿಯಂತರರು ನಿಗದಿಪಡಿಸಿದ ದರವನ್ನು ಕ್ಯಾಂಟೀನ್ ಬಾಡಿಗೆಗೆ ನಿಗದಿಪಡಿಸುವುದು.
   (ii) ಉಪ ನಿರ್ದೇಶಕರು ಕೋರಿಕೆ ಸಲ್ಲಿಸಿದಾಗ ಕಟ್ಟಡವನ್ನು ಹಿಂದಿರುಗಿಸತಕ್ಕದ್ದು.
   (iii) ಕಟ್ಟಡ ವಿದ್ಯುಧೀಕರಣ, ಸುಣ್ಣಬಣ್ಣ, ನೀರಿನ ಬಿಲ್ಲಿನ ಪಾವತಿ ಇತರೆ ಮೂಲಭೂತ ಸೌಕರ್ಯಗಳ ಬಗ್ಗೆ ಜಿಲ್ಲಾಧಿಕಾರಿಗಳ ಕಛೇರಿಯಿಂದ ನಿರ್ವಹಣೆ ಮಾಡತಕ್ಕದ್ದು.
2. ಬಿತ್ತನೆ ಕೋಠಿ ಕಟ್ಟಡದಲ್ಲಿ ಪವರ್ ಲಿಫ್ಟ್ ಅಳವಡಿಸಲು ಅನುಮತಿ.
3. ಉಪ ನಿರ್ದೇಶಕರು, ರೇಷ್ಮೆ ಇಲಾಖೆ ಇವರ ಹಾಲಿ ಇರುವ ಕಛೇರಿಯನ್ನು ಮುಖ್ಯ ಕಟ್ಟಡದ ಮೂರನೇ ಅಂತಸ್ತಿನಲ್ಲಿರುವ ಎಡ ಭಾಗದ ಕಟ್ಟಡಕ್ಕೆ ಸ್ಥಳಾಂತರಿಸಿ ಖಾಲಿಯಾಗುವ ವಸತಿ ಗೃಹವನ್ನು (ಕಛೇರಿಯನ್ನು) ತಾತ್ಕಾಲಿಕವಾಗಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳ ಅಧಿಕೃತ ನಿವಾಸವನ್ನಾಗಿ ಮಾಡಿಕೊಳ್ಳಲು ಅನುಮತಿ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 872

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಹಾವೇರಿ ನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ: 117: ಯೋಯೋಕ 2006, ದಿನಾಂಕ: 14–06–2006.

2 ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾಶಿಇ/10/ ಯೋಜನೆ 2006–2007/ದಿನಾಂಕ: 26–02–2008.

**ಪ್ರಸ್ತಾವನೆ:**

(1) ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಧಾರವಾಡದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸಲು ಅನುಮತಿ ನೀಡಿ, ಅದರ ಕಟ್ಟಡ ನಿರ್ಮಾಣಕ್ಕಾಗಿ 35.00 ಲಕ್ಷಗಳನ್ನು ಒದಗಿಸಲಾಗಿದೆ.

(2) ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು ಧಾರವಾಡಕ್ಕೆ ಮಂಜೂರಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ 80.00 ಲಕ್ಷಗಳಿಗೆ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಸಲ್ಲಿಸಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 391: ಯೋಸಕ 2007 ಬೆಂಗಳೂರು, ದಿನಾಂಕ: 27ನೇ ಮೇ 2008**

**(ಇಡಿ: 123: ಸ್ವೀಮರ (ಯುನಿಕ್) 2008, ದಿನಾಂಕ 27ನೇ ಮೇ 2008)**

(4) 2006–07ನೇ ಸಾಲಿಗೆ ಹಾವೇರಿಯಲ್ಲಿ ಪ್ರಾರಂಭಿಸಲಾಗಿರುವ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣದ ಕಾಮಗಾರಿಯ 80.00 ಲಕ್ಷ ರೂ.ಗಳ (ಎಂಭತ್ತು ಲಕ್ಷ ರೂಪಾಯಿಗಳು ಮಾತ್ರ) ನಕ್ಷೆ ಮತ್ತು ಅಂದಾಜಿಗೆ ಕಾಮಗಾರಿಯನ್ನು ಪ್ರಚಲಿತವಿರುವ ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳುವ ಹಾಗೂ 2007–08ನೇ ಸಾಲಿನ ಮುಂದುವರಿಕೆ ಕಾರ್ಯಕ್ರಮದಡಿ 2008–09ನೇ ಸಾಲಿಗೆ ಅನುದಾನ ಒದಗಿಸಿಕೊಳ್ಳುವ ಷರತ್ತನ್ನು ವಿಧಿಸಿ ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಅನುಮತಿ ನೀಡಿದೆ.

(5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿ.ಇ: 442: ಐ:ಎಫ್ (ಬಿಎ) 2008/ದಿನಾಂಕ: 15–03–2008 ರಲ್ಲಿನ ಸಹಮತಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ:1:ಟಿಎಫ್‌ಪಿ 2002 ದಿನಾಂಕ: 20–01–2003ರ ಐಟಂ 46ರ ಅನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 875

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ಚಾಮರಾಜನಗರ ಜಿಲ್ಲೆ ನಂಜನಗೂಡಿನಲ್ಲಿರುವ ಸರ್ಕಾರಿ ಪರಿಶಿಷ್ಠ ಜಾತಿ: ಪರಿಶಿಷ್ಠ ಪಂಗಡದ ಪ್ರತಿಭಾನ್ವಿತ ಹೆಣ್ಣು ಮಕ್ಕಳ ಸರ್ಕಾರಿ ವಸತಿ ಪ್ರೌಢಶಾಲೆಯ ಆವರಣದಲ್ಲಿನ 100X100 ಜಾಗವನ್ನು ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು (ಪ್ರೌಢ ಶಿಕ್ಷಣ), ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪತ್ರಸಂಖ್ಯೆ: ಯೋ7 ವಪ್ರೌನಿಹ/72/ 2006–07/ ದಿನಾಂಕ: 01–03–2008

**ಪ್ರಸ್ತಾವನೆ:**

(1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು (ಪ್ರೌಢಶಿಕ್ಷಣ), ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು, ಚಾಮರಾಜನಗರ ಜಿಲ್ಲೆ, ನಂಜನಗೂಡಿನಲ್ಲಿರುವ ಸರ್ಕಾರಿ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡದ ಪ್ರತಿಭಾನ್ವಿತ ಹೆಣ್ಣು ಮಕ್ಕಳ ಸರ್ಕಾರಿ ವಸತಿ ಪ್ರೌಢಶಾಲೆಯ ಆವರಣದಲ್ಲಿನ 100X100 ಅಡಿ ಜಾಗವನ್ನು ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 120: ಯೋಸಕ 2008 ಬೆಂಗಳೂರು, ದಿನಾಂಕ 27ನೇ ಮೇ 2008**

**(ಇಡಿ:120: ಸ್ವೀಮರ (ಯುನಿಕ್) 2008, ದಿನಾಂಕ 27ನೇ ಮೇ 2008)**

(3) ಚಾಮರಾಜನಗರ ಜಿಲ್ಲೆ ನಂಜನಗೂಡಿನಲ್ಲಿನ ಸರ್ಕಾರಿ ಪರಿಶಿಷ್ಠ ಜಾತಿ: ಪರಿಶಿಷ್ಠ ಪಂಗಡದ ಪ್ರತಿಭಾನ್ವಿತ ಹೆಣ್ಣು ಮಕ್ಕಳ ಸರ್ಕಾರಿ ವಸತಿ ಪ್ರೌಢಶಾಲೆಯ ಆವರಣದಲ್ಲಿನ 100X100 ಅಡಿ ಜಾಗವನ್ನು ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲು ನಿಯಮಾನುಸಾರ ಕ್ರಮ ಕೈಗೊಳ್ಳಲು ಅಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 876

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

**ಕಂದಾಯ ಸಚಿವಾಲಯ**

**ವಿಷಯ:** 2008–09ನೇ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಇತ್ತೀಚೆಗೆ ಸುರಿದ ಭಾರಿ ಮಳೆಯಿಂದ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಹಾನಿ ಸಂಭವಿಸಿದ್ದು, ಸದರಿ ಹಾನಿಗೆ ತುರ್ತು ಪರಿಹಾರ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಅವಶ್ಯಕತೆ ಇರುವುದರಿಂದ ಹಾಗೂ ಜಿಲ್ಲಾಧಿಕಾರಿಗಳ ಸಿ.ಆರ್.ಎಫ್.ಪಿ.ಡಿ. ಖಾತೆಯಲ್ಲಿ ಕನಿಷ್ಠ ಮೊತ್ತ ಉಳಿಕೆ ಇರುವುದರಿಂದ ಈ ಜಿಲ್ಲೆಗಳಿಗೆ ಅನುದಾನ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 145 ಟಿಎನ್‌ಆರ್ 2008, ಬೆಂಗಳೂರು ದಿನಾಂಕ: 2ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಪ್ರಕೃತಿ ವಿಕೋಪದಿಂದ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಬಿಡುಗಡೆ ಮಾಡಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಬೆಂಗಳೂರು (ನಗರ) | 50.00 |
| 2. | ಬಳ್ಳಾರಿ | 50.00 |
| 3. | ಚಿತ್ರದುರ್ಗ | 50.00 |
| 4. | ಉತ್ತರ ಕನ್ನಡ | 50.00 |
| 5. | ಕೊಡಗು | 50.00 |
| 6. | ಶಿವಮೊಗ್ಗ | 50.00 |
| **ಒಟ್ಟು** | | **300.00** |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕೆಳಕಂಡಂತೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು.

1) ಮಾನವ ಜೀವಹಾನಿ
2) ಜಾನುವಾರು ಜೀವಹಾನಿ
3) ಕುಡಿಯುವ ನೀರು
4) ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿ

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನವನ್ನು ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 467 ವೆಚ್ಚ–7/08 ದಿನಾಂಕ: 12.5.2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 894

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ದಾವಣಗೆರೆ ಜಿಲ್ಲೆ ಜಗಳೂರು ಪಟ್ಟಣದ ಸ್ಥಳೀಯ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ನಅಇ 79 ಬೆಮಪ್ರಾ 2006 ದಿನಾಂಕ: 22.07.2006.'
2 ಮುಖ್ಯಾಧಿಕಾರಿಗಳು, ಪಟ್ಟಣ ಪಂಚಾಯಿತಿ: ಯೋಜನಾ ಪ್ರಾಧಿಕಾರ ಜಗಳೂರು ಇವರ ಪತ್ರ ಸಂ: ಪಪಂ: ಯೋಪ್ರಾ:ಜಗ: ಮ.ಯೋ: (ಅಂತಿಮ): 2007–08 ದಿ. 26.02.2008 ದಿನಾಂಕ: 17.03.2008.
3. ದಿನಾಂಕ 03.04.2008 ರಂದು ಕಡತ ಸಂಖ್ಯೆ: ನಯೋ (12): ಉನಿ (ಕೆ.ಕಾ) : ಜ.ಮ.ಯೋ.ಅಂ: 219:07–08 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರ ಸರ್ಕಾರಿ ಆದೇಶದಲ್ಲಿ ದಾವಣಗೆರೆ ಜಿಲ್ಲೆ ಜಗಳೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಮುಖ್ಯಾಧಿಕಾರಿಗಳು, ಪಟ್ಟಣ ಪಂಚಾಯಿತಿ: ಯೋಜನಾ ಪ್ರಾಧಿಕಾರ, ಜಗಳೂರು ಇವರು ದಾವಣಗೆರೆ ಜಿಲ್ಲೆಯ ಜಗಳೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾ ಯೋಜನೆಯನ್ನು ತಯಾರಿಸಿ ಅಂತಿಮ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಜಗಳೂರು ಪಟ್ಟಣದ ಜನಸಂಖ್ಯೆಯು 2021ನೇ ಇಸವಿಗೆ 25,000 ಗಳಷ್ಟು ಬೆಳವಣಿಗೆ ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಜಗಳೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 580 ಹೆಕ್ಟೆರ್ ಪ್ರದೇಶದಲ್ಲಿ 278 ಹೆಕ್ಟೆರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 278 ಹೆಕ್ಟೆರ್ ಪ್ರದೇಶದಲ್ಲಿ ವಸತಿಗಾಗಿ 139.12 ಹೆಕ್ಟೆರ್ (ಶೇ. 50.04) ವಾಣಿಜ್ಯಕ್ಕಾಗಿ 13.06 ಹೆಕ್ಟೆರ್ (ಶೇ. 4.07), ಕೈಗಾರಿಕೆಗಾಗಿ 1.25 ಹೆಕ್ಟೆರ್ (ಶೇ. 0.45), ಸಾರ್ವಜನಿಕ: ಅರೆಸಾರ್ವಜನಿಕ ಉಪಯೋಗಕ್ಕೆ 33.26 ಹೆಕ್ಟೆರ್ (ಶೇ. 11.96), ಉದ್ಯಾನವನ: ಬಯಲು ಜಾಗಗಳಿಗೆ 23.66 ಹೆಕ್ಟೆರ್ (ಶೆ. 8.51), ಸಾರ್ವಜನಿಕ ಉಪಯುಕ್ತತೆಗಾಗಿ 4.56 ಹೆಕ್ಟೆರ್ (ಶೇ. 1.66) ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ 63 ಹೆಕ್ಟೆರ್ (ಶೇ. 22.67) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರ ಪ್ರಕಾರ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 47 ಬೆಂರೂಪ್ರಾ 2008 ಬೆಂಗಳೂರು ದಿನಾಂಕ: 20ನೇ ಮೇ 2008**

ದಾವಣಗೆರೆ ಜಿಲ್ಲೆ ಜಗಳೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3)ರನ್ವಯ ಸರ್ಕಾರವು ಅಂತಿಮ ಅನುಮೋದನೆ ನೀಡಲಾಗಿದೆ.

ಮಹಾಯೋಜನೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 882

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**INFRASTRUCTURE DEVELOPMENT SECRETARIAT**

**Sub:** Release of funds under contingency towards claim for MPLS/LAN and Wireless Network – reg

**Read :**
1 Letter dated 23.02.2008/Shiv of CEO, BIAL Contingent amount disbursement request No. SFS ("C")-06/2007-08 of BIAL dated 23.02.2008
2 Letter No. iDeCK/2008-09/26 dated 09.04.2008 of Sr. Associate, iDeCK.

**Preamble:**

BIAL in its letter dated 23.02.2008 read above had claimed an amount of Rs. 11.82 crores towards claim for MPLS/LAN and Wireless Network. The remarks of iDeCK on the said request has been obtained and iDeCK in their report dated 09.04.2008 referred above, have opined that BIAL's request is in accordance with the procedures laid down in clauses 3.2, 3.4 and 3.5 of the State Support Agreement and have recommended for the release of Rs. 11.82 crores to BIAL towards claim for MPLS/LAN and Wireless Network.

2. The proposal has been examined in detail and the following orders are issued.

**Government Order No. IDD 62 DIA 2008 Bangalore Dated 3rd June 2008**

In the circumstances explained in the preamble, Government after examining the proposal of BIAL, agrees to release of 11.82 crores (Rupees Eleven crores eighty two lakhs) only towards claim for MPLS/LAN and Wireless Network.

2. This expenditure shall be met under the Head of Account ***"5465-01-190-2-02 (Plan)-100-Financial Assistance / Relief"*** out of Rs. 55.00 crores provided in 2008-09 Budget subject to the condition that clauses 3.2, 3.4 and 3.5 of the State Support Agreement are complied by BIAL.

3. This Chairperson & Managing Director, KSIIDC is authorized to draw the above amount of Rs. 11.82 crores (Rupees Eleven crores eithty two lakhs) only on a payees receipt counter signed by the Under Secretary to Government, Infrastructure Development Department.

4. This order issues with the concurrence of Finance Department vide Endorsement No. FD 615 Exp-I/08, dated 24.05.2008.

By order and in the Name of the President of India

**N. Manjula Geetha**

PR. 883

Under Secretary to Government,

Infrastructure Development Department.

**HEALTH AND FAMILY WELFARE SECRETARIAT**

**Sub:** Nominating participants for the Masters Course in Public Health - reg

**Preamble:**

Training of Officers is a continuous process under Organization Development Component and it is necessary that officers are sent for higher studies for skill upgradation. The SRM University, Chennai, Tamilnadu is offering a Masters Course in Public Health for 2 years.

It is considered to sponsor Dr. H.S. Jagadeesha, Deputy Director (M&F), Directorate of HFW Services and Dr. Ravikumar, Deputy Director, Directorate of Health and Family Welfare Services for the Masters Course in Public Health. The details of expenses per candidate, required for undergoing the course are as follows:

| No. | Details | I Year | II Year | Total | Remarks |
|---|---|---|---|---|---|
| 1. | Tution Fees | 1,00,000.00 | 1,00,000.00 | 2,00,000.00 | During Admission |
| 2. | Hostel | 55,000.00 | 55,000.00 | 1,10,000.00 | To be paid during the time of getting Hostel accommodation. |
| 3. | Examination Fees | 6,000.00 | 6,000.00 | 12,000.00 | To be paid during the semester examinations |
| 4. | Costs for Books | 10,000.00 | 10,000.00 | 20,000.00 | To be purchased by the student directly |
| | **Total** | **1,71,000.00** | **1,71,000.00** | **3,42,000.00** | |
| | **Total for 2 candidates** | | | **6,84,000.00** | |

Hence, the following order.

**Government Order No. HFW/KHSDRP/OD/SRM/Trg-9/2008-09, Bangalore Dated: 30th May 2008**

Under the circumstances mention in the preamble Government have pleased to depute Dr. H.S. Jagadeesha, Deputy Director (M&F), Directorate of HFW Services and Dr. Ravikumar, Deputy Director, Directorate of Health and Family Welfare Services for the 2 years Masters Course in Public

Health at SRM University, 5th Floor, SRM Medical College Building, SRM Nagar, Kattankulathur-603203, Kanchipuram District, Tamil Nadu. Karnataka Health System Development and Reform Project shall be bearing the entire expenditure required for the course. The total expenditure of Rs. 6,84,000/- (Rupees six lakhs eighty four thousand) only includes tuition fees, hostel fees, examination fees and costs for books.

The expenditure towards the course shall be debitable under the Head of Account "2210-06-800-0-81-015 (Subsidiary Expenses) (OD) for the year 2008-09.

By order and in the Name of the President of India

**SUSHMA GODBOLE**

PR. 886

Deputy Secretary to Government,

KHSDRP

Health and Family Welfare Department.

**No: HFW/KHSDRP/SE/SICF/2007-08 Dated: 04th June 2008**

**CORRIGENDUM**

In the Government Order No. HFW/KHSDRP/SE/SICF/2007-08 Bangalore, dated 02.04.2008 the Head of Account "2210-06-800-0-85-059 (SICF- other expenses)" shall be and shall always be deemed to have been read as **"4210-01-110-1-87-139 (SICF-Major Works)".**

By order and in the Name of the Governor of Karnataka

**SUSHMA GODBOLE**

PR. 887

Deputy Secretary to Government,

KHSDRP

Department of Health and Family Welfare

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಹುಡ್ಕೋದಿಂದ ಪಡೆದ ಸಾಲಕ್ಕೆ 2008ನೇ ಮೇ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಬಡ್ಡಿ ಮತ್ತು ಅಸಲು ಪಾವತಿಸಲು ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ: ಕೆಆರ್‌ಡಿಸಿಎಲ್/ಎಂ.ಡಿ/0193/ 2008–2009. ದಿನಾಂಕ 29–04–2008

**ಪ್ರಸ್ತಾವನೆ:**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಕೈಗೊಳ್ಳುತ್ತಿರುವ ಯೋಜನೆಗಳಿಗಾಗಿ ಹುಡ್ಕೋದಿಂದ ಪಡೆದ ಸಾಲವು ಈವರೆಗೆ ಒಟ್ಟು 563.54 ಕೋಟಿ ರೂ.ಗಳು ಬಾಕಿ ಇರುತ್ತದೆ. ಓದಲಾದ ದಿನಾಂಕ 29–04–2008ರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, 2008ನೇ ಮೇ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಸಾಲದ ಮರುಪಾವತಿಗೆ 18598ರ ಸ್ಕೀಂನಡಿ ದಿನಾಂಕ 15–03–2008ರ ಅಂತ್ಯಕ್ಕೆ ಬಾಕಿ ಇರುವ ರೂ. 127.42 ಕೋಟಿಗಳ ಮೊತ್ತದ ಮೇಲಿನ ಬಡ್ಡಿಯು ರೂ. 3,50,68.125/– ಗಳು (ಮೂರು ಕೋಟಿ ಐವತ್ತು ಲಕ್ಷ ಅರವತ್ತೆಂಟು ಸಾವಿರದ ನೂರ ಇಪ್ಪತ್ತೈದು ರೂಪಾಯಿಗಳು ಮಾತ್ರ) ಹಾಗೂ ಅಸಲು ರೂ. 7,21,00.000/– (ಏಳು ಕೋಟಿ ಇಪ್ಪತ್ತೊಂದು ಲಕ್ಷ ರೂಪಾಯಿಗಳು ಮಾತ್ರ)ಗಳು ಸೇರಿ ಒಟ್ಟು 10,71,68,125/– (ಹತ್ತು ಕೋಟಿ ಎಪ್ಪತ್ತೊಂದು ಲಕ್ಷದ ಅರವತ್ತೆಂಟು ಸಾವಿರದ ನೂರ ಇಪ್ಪತ್ತೈದು ರೂಪಾಯಿಗಳು ಮಾತ್ರ)ಗಳನ್ನು ಹುಡ್ಕೋಗೆ ಪಾವತಿಸಲು ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 30 ಇಎಪಿ 2008 ಬೆಂಗಳೂರು, ದಿನಾಂಕ 15ನೇ ಮೇ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಹುಡ್ಕೋದಿಂದ ಪಡೆದುಕೊಂಡಿರುವ ಸಾಲದ ಬಾಬತ್ತಿಗೆ 2008ನೇ ಮೇ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕ ಅವಧಿಗೆ ಬಡ್ಡಿ ಹಾಗೂ ಅಸಲು ಸೇರಿ ಒಟ್ಟು ರೂ. 10,71,68,125/– (ಹತ್ತು ಕೋಟಿ ಏಪ್ಪತ್ತೊಂದು ಲಕ್ಷದ ಅರವತ್ತೆಂಟು ಸಾವಿರದ ನೂರ ಇಪ್ಪತ್ತೈದು ರೂಪಾಯಿಗಳು ಮಾತ್ರ)ಗಳನ್ನು ಲೆಕ್ಕಶೀರ್ಷಿಕೆ "5054–80–190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ"ರ ಅಡಿಯಲ್ಲಿ ಹುಡ್ಕೋಗೆ ಪಾವತಿಸಲು ಬಿಡುಗಡೆ ಮಾಡಲು ಆದೇಶಿಸಲಾಗಿದೆ.

2. ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀದಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ/280 ಆಕೋ–1/2008 ದಿನಾಂಕ 14–05–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 803

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

## WATER RESOURCES SECRETARIAT

**Sub:** Establishment of 'Computer Cell' in Minor Irrigation Department-orders-reg.

**Read :** Govt. Order No. PWD 57 EAP 2002 dated 03.08.2002

**Preamble:**

In the Government Order dated 03.08.2002 read above, sanction was accorded to establish an Information Technology Cell in the PWD Secretariat for implementation of e-Governance in PWD. Similarly, the Minor Irrigation Department also needs a Information Technology Cell to deal with the issues connected with e-Governance.

The Minor Irrigation Department is an independent department under the Karnataka Government Secretariat. The project with command area (atchkat) between 40 Ha. to 2000 Ha. are under the administrative control of the Minor Irrigation Department and the tank works including pick-ups, bandaras, percolation tank, barrages and lift irrigation schemes etc. are being implemented/taken up by the department. The Ground water wing of Mines & Geology department is also coming under the Minor Irrigation Department. The Ground water wing is involved in recording fluctuation of Ground water levels, identification of high exploitation areas suggest remedial measures for recuperation of ground water level, rendering technical advice in sinking borewells, monitoring quality of ground water, construction of artificial recharges structures etc. In addition to that special package announced by Hon'ble Prime Minister for ameliorating the hardship of farmers is being implemented in the identified districts with the loan assistance by the NABARD. The rejuvenation of tanks through the Jala Samvardhana Yojana Sangha with the World Bank assistance are also taken up in various districts.

For implementation of aforesaid works and various other works in a proper and perspective way and as part of e-Governance programme, it is proposed to establish a computer cell in the Minor Irrigation Department on the lines of Information Technology Cell established in PWD without creating any extra posts. The Cell is created by drawing officers and staff within the department. There will be no extra financial burden on the exchequer. Hence the following order.

**Government Order No. SANIYI 36 SESAYE 2008 Bangalore, Dated the 2nd June 2008**

Sanction is accorded to establish a 'Computer Cell' in the Minor Irrigation Department directly under the control of Secretary, Water Resources Department (Minor Irrigation) by redeploying the following supporting staff from the field department coming under the jurisdiction of Minor Irrigation Department.

1. Assistant Executive Engineer : one
2. Assistant Engineer : two
3. Data Entry Operator/Computer Operator : one
4. Group 'D' : one

2. The posts shall be filled up on deputation basis by redeployment of suitable officers/officials drawing from the Chief Engineer's office without involving any financial commitment to the State Government

3. The Computer Cell will be under the direct control of the Secretary, Water Resources Department (Minor Irrigation). The Computer Cell will be provided suitable accommodation, furniture, equipment within the available resources.

4. The functions of Computer Cell in the Minor Irrigation Department is as under:

i) Suggest policy framework and technical aspects, organize Technical Advisory Panel meetings and issue the necessary guidelines, circulars and Government Orders for effective implementation of e-Governance programme in a phased manner.
ii) Study the e-Governance programmes, policies of other State, Central Government or other departments and prepare a course of action for adopting the best of them wherever applicable.
iii) Co-ordinate for collection of Integration of computerized data from all State Minor Irrigation offices with data warehousing.
iv) Act as a hub for inter department connectivity and data transfer
v) Develop software required for the Department by (a) in-house development (b) outsourcing (c) customization of available software or (d) adopting software available elsewhere.
vi) Provide guidance to the Minor Irrigation offices in Information Technology related matters.
vii) Organise trainings and provide a platform for disseminating latest relating information by arranging workshops, seminars etc.
viii) Make arrangements for procurement, installation, maintenance and operation of computer systems, peripherals and network in Minor Irrigation in good condition across the state.
ix) Prepare cost estimates, effect procurement of hardware and software, allocation of grants, budgeting and miscellaneous financial provisions for implementation of e-Governance in Minor Irrigation.
x) Assist the Secretariat in maintaining and updating the Personnel Information System for the staff of the Minor Irrigation Department.
xi) Host, maintain and update the Minor Irrigation Department website.
xii) Any other related functions assigned by the Government from time to time.

By order and in the Name of the Governor of Karnataka
**K. SUDHAKARA SHETTY**
Under Secretary to Government,
Water Resources Department (Minor Irrigation)

PR. 888

**FOREST, ECOLOGY AND ENVIRONMENT SECRETARIAT**
**No. FEE 83 FLL 2008 Bangalore Dated: 26th May 2008**
**CORRIGENDUM**

In condition No. 30 in the order portion of Government Order No. FEE 112 FLL 2006, dated: 19.01.2007, the word "Sublease" is deleted.

By order and in the Name of the President of India
**P.R. KALAVATHI**
Under Secretary to Government,
Forest, Ecology and Environment Department.

PR. 893

**ಕಂದಾಯ ಸಚಿವಾಲಯ**

**ವಿಷಯ:** ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸಲು ಜಿಲ್ಲಾಧಿಕಾರಿಗಳಿಗೆ ವಾಹನ ಒದಗಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಇವರ ಪತ್ರ ಸಂಖ್ಯೆ: ಸಿಎಎಲ್:ಸಿಆರ್.30/07–08 ದಿ: 21.2.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪ್ರಕೃತಿ ವಿಕೋಪದಂತಹ ಸಂದರ್ಭದಲ್ಲಿ ತುರ್ತು ರಕ್ಷಣಾ ಕಾರ್ಯ ಕೈಗೊಳ್ಳಲು ವಾಹನವನ್ನು ಒದಗಿಸುವಂತೆ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ ಬೇಡಿಕೆ ಬಂದಿರುತ್ತದೆ.

ರಾಜ್ಯದಲ್ಲಿ ಸಂಭವಿಸುತ್ತಿರುವ ಪ್ರವಾಹ ಪರಿಸ್ಥಿತಿ ಸಂದರ್ಭದಲ್ಲಿ, ತುರ್ತು ರಕ್ಷಣಾ ಕಾರ್ಯ ಕೈಗೊಳ್ಳಲು ವಾಹನದ ಅವಶ್ಯಕತೆ ಇರುವುದನ್ನು ಸರ್ಕಾರವು ಪರಿಗಣಿಸಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಖರೀದಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 2006, ಬೆಂಗಳೂರು ದಿನಾಂಕ: 1ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ರಕ್ಷಣಾ ಕಾರ್ಯಕ್ಕಾಗಿ ಜಿಲ್ಲಾಧಿಕಾರಿ ಬಳಿಯಲ್ಲಿ ಲಭ್ಯವಿರುವ ಸಿ.ಆರ್.ಎಫ್. ನಿಧಿಯಿಂದ ವಿಮೆ ಹಾಗೂ ಎಲ್ಲಾ ತೆರಿಗೆಗಳೂ ಸೇರಿದಂತೆ, ರೂ. 5.50 ಲಕ್ಷಗಳ (ರೂ. ಐದು

ಲಕ್ಷದ ಐವತ್ತು ಸಾವಿರಗಳು ಮಾತ್ರ) ಮಿತಿಗೆ ಒಳಪಟ್ಟು ಚಿಕ್ಕಬಳ್ಳಾಪುರ ನೂತನ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ನಿಯಮಾನುಸಾರ ಖರೀದಿಸಲು ಅನುಮೋದನೆ ನೀಡಿದೆ.

1. ಈ ವಾಹನವು all terrain, wall weather ನಲ್ಲಿ ಬಳಸುವಂತಿರಬೇಕು.
2. ಈ ವಾಹನದಲ್ಲಿ ಕನಿಷ್ಠ 4–5 ಜನರಿಗೆ ಸ್ಥಳಾವಕಾಶವಿರಬೇಕು.
3. ಈ ವಾಹನವು ತುರ್ತು ಸಂದರ್ಭದಲ್ಲಿ search and rescue equipment ಗಳನ್ನು ಅಳವಡಿಸಿಕೊಂಡು ಸಾಗಿಸುವಂತಿರಬೇಕು.
4. ವಾಹನಕ್ಕೆ ತಗಲುವ ಹೆಚ್ಚುವರಿ ವೆಚ್ಚವನ್ನು ಜಿಲ್ಲಾಧಿಕಾರಿಗಳ ಸಾದಿಲ್ವಾರು ನಿಧಿಯಿಂದ ಭರಿಸುವುದು.
5. ವಾಹನದ ದುರಸ್ತಿ ವೆಚ್ಚ, ನಿರ್ವಹಣೆ, ಇಂಧನ ವೆಚ್ಚ, ಚಾಲಕರ ವೇತನ ಹಾಗೂ ಇತರೆ ಖರ್ಚು ವೆಚ್ಚಗಳನ್ನು ಜಿಲ್ಲಾಧಿಕಾರಿಗಳು ಅವರ ವಾರ್ಷಿಕ ಆಯ–ವ್ಯಯ ಅನುದಾನದಲ್ಲಿಯೇ ಭರಿಸತಕ್ಕದ್ದು. ಸಿ.ಆರ್.ಎಫ್. ನಿಧಿಯಿಂದ ಭರಿಸುವಂತಿಲ್ಲ.
6. ವಾಹನವನ್ನು DGST ದರ ಒಪ್ಪಂದದಂತೆ ಮೇಲೆ ಸೂಚಿಸಿರುವ ಮಿತಿಗೊಳಪಟ್ಟು ಖರೀದಿಸುವುದು.
7. ಈ ವಾಹನವು ಯಾವುದೇ ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸುವಂತಿರಬೇಕು.
8. ವಾಹನ ಖರೀದಿಯ ಎಲ್ಲಾ ಪ್ರಕ್ರಿಯೆಯನ್ನು ಈ ಆರ್ಥಿಕ ವರ್ಷದಲ್ಲಿಯೇ ಮುಗಿಸುವುದು.

ಈ ಅನುದಾನವನ್ನು ವೆಚ್ಚ ಮಾಡುವಾಗ ಕಾಲಕಾಲಕ್ಕೆ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆ ಹಾಗೂ ಖರೀದಿ ನಿಯಮಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 410

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ವಿಷಯ:** ನೆರೆಹಾವಳಿ/ಪ್ರವಾಹ ಉಂಟಾದ ಸಮಯದಲ್ಲಿ ರಕ್ಷಣಾ ಕಾರ್ಯಕ್ಕಾಗಿ ದೋಣಿಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್ಆರ್ 2006 ದಿ: 18.12.06 ಹಾಗೂ ದಿನಾಂಕ 9.3.2007.

2 ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ ಇವರ ಪತ್ರ ಸಂಖ್ಯೆ: ಎಬಿ/ಎಫ್ಎಫ್ಎಎಲ್/ವಿವ 15/ 2005–06 ದಿನಾಂಕ 08.01.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ರಕ್ಷಣಾ ಕಾರ್ಯಕ್ಕೆ ಒಟ್ಟು 12 ದೋಣಿಗಳನ್ನು ಖರೀದಿಸಲು ಅನುಮತಿ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರು ಬೆಳಗಾವಿ ಜಿಲ್ಲೆಯಲ್ಲಿ ಹರಿಯುವ ಕೃಷ್ಣ ವೇದಗಂಗ, ದೂದಗಂಗಾ, ಹಿರಣ್ಯಕೇಶಿ, ಘಟಪ್ರಭಾ, ಮಲಪ್ರಭಾ, ಮಾರ್ಕಂಡೇಯ ನದಿಗಳಲ್ಲಿ ಸಾಮಾನ್ಯವಾಗಿ ಪ್ರತಿ ವರ್ಷ ಪ್ರವಾಹದಿಂದಾಗಿ ಹಾಗೂ ಮಹಾರಾಷ್ಟ್ರದಲ್ಲಿ ಆಗುವ ಅತಿವೃಷ್ಟಿಯಿಂದ ಖಾನಾಪುರ ಹುಕ್ಕೇರಿ, ಗೋಕಾಕ, ಚಿಕ್ಕೋಡಿ, ರಾಯಭಾಗ ಮತ್ತು ಅಥಣಿ ತಾಲ್ಲೂಕಿನ ಗ್ರಾಮಗಳು ಜಲಾವೃತವಾದಾಗ ಸಾರಿಗೆ ಸಂಪರ್ಕ ಕಡಿದು ಜನ ಜಾನುವಾರುಗಳನ್ನು ಸುರಕ್ಷಿತ ಸ್ಥಳಗಳಿಗೆ ಸ್ಥಳಾಂತರಿಸಲು ಟೆಂಡರುಗಳಲ್ಲಿ ಸ್ಪರ್ಧಾತ್ಮಕ ದರಗಳನ್ನು ನೀಡಿರುವ ಮೆ: ಮಹೇಶ್ ಬೋಟ್ ಬಿಲ್ಡರ್ಸ್, ಸಾಂಗಲಿ ಇವರಿಂದ 26 ಅಡಿ ಉದ್ದ 8 ಅಡಿ ಅಗಲ 2½ ಅಡಿ ಎತ್ತರ ಹಾಗೂ 4 ಎಂಎಂ ಫೈಬರ್ ಗ್ಲಾಸ್ ಹೊದಿಕೆ ಇದ್ದು ಯಂತ್ರ ಸಹಿತ 25 ಅಶ್ವ ಶಕ್ತಿ ಉಳ್ಳ ಯಮಾಹ/ಮರ್ರೈನರ್ ಹೊರಯಂತ್ರ ಅಳವಡಿಸಿರುವ ಹಾಗೂ ಇದಕ್ಕೆ ಸಂಬಂಧಪಟ್ಟಂತೆ ಎಲ್ಲ ಸಲಕರಣೆಗಳನ್ನು ಸೇರಿ 30 ರಿಂದ 40 ಪ್ರಯಾಣಿಕರನ್ನು ಸಾಗಿಸುವ ಸಾಮರ್ಥ್ಯವುಳ್ಳ ಯಾಂತ್ರಿಕ ದೋಣಿಗಳನ್ನು ಜಾಗೆಯ ಮೇಲೆ ಮುಟ್ಟಿಸುವ ಕರಾರಿನೊಂದಿಗೆ ಪ್ರತಿ ದೋಣಿ ಒಂದಕ್ಕೆ ರೂ. 3,40,300.00 ದರದಂತೆ 15 ದೋಣಿಗಳನ್ನು ರೂ. 51,04,500.00 ಗಳ ವೆಚ್ಚದಲ್ಲಿ ಖರೀದಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಬೆಳಗಾವಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಪ್ರತಿವರ್ಷ ಬೆಳಗಾಂವ ಜಿಲ್ಲೆಯಲ್ಲಿ ಪ್ರವಾಹ ಬಂದಾಗ ಜನ ಜಾನುವಾರುಗಳನ್ನು ಸ್ಥಳಾಂತರಿಸಲು ಕಾರವಾರದಿಂದ ದೋಣಿಗಳನ್ನು ಬಾಡಿಗೆ ಪಡೆದು ಸಾಗಣೆ ಮಾಡಿ ದೋಣಿಯ ಮಾಸಿಕ ಹಾಗೂ ಸಿಬ್ಬಂದಿಯ ವೆಚ್ಚ ಭರಿಸುವುದು ಹೆಚ್ಚಿನ ವೆಚ್ಚವಾಗುವುದೆಂದು ಗಮನಿಸಿ ದೋಣಿಗಳನ್ನು ಖರೀದಿಸಲು ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 17 ಟಿಎನ್ಆರ್ 2008 ಬೆಂಗಳೂರು ದಿನಾಂಕ 15ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರವಾಹ/ನೆರೆಹಾವಳಿ ಸಮಯದಲ್ಲಿ ಜನ ಜಾನುವಾರುಗಳನ್ನು ರಕ್ಷಿಸಲು ಹಾಗೂ ಸ್ಥಳಾಂತರಿಸಲು, ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಟೆಂಡರುಗಳಲ್ಲಿ/ಸ್ಪರ್ಧಾತ್ಮಕ ದರಗಳನ್ನು

ನೀಡಿರುವ ಮೆ: ಮಹೇಶ್ ಬೋಟ್ ಬಿಲ್ಡರ್ಸ್, ಸಾಂಗಲಿ ಇವರಿಂದ 26 ಅಡಿ ಉದ್ದ 8 ಅಡಿ ಅಗಲ 2½ ಅಡಿ ಎತ್ತರ ಹಾಗೂ ಉಕ್ಕಿನ 4 ಎಂಎಂ ಫೈಬರ್ ಗ್ಲಾಸ್ ಹೊದಿಕೆ ಇದ್ದು ಯಂತ್ರ ಸಹಿತ 25 ಅಶ್ವ ಶಕ್ತಿಯುಳ್ಳ ಯಮಹಾ/ಮರೈನರ್ ಹೊರಯಂತ್ರ ಅಳವಡಿಸಿದ ಹಾಗೂ ಇದಕ್ಕೆ ಸಂಬಂಧಪಟ್ಟ ಎಲ್ಲ ಸಲಕರಣೆಗಳನ್ನು ಸೇರಿ 30 ರಿಂದ 40 ಜನಗಳನ್ನು ಸಾಗಿಸುವ ಸಾಮರ್ಥ್ಯವುಳ್ಳ ಯಾಂತ್ರಿಕ ದೋಣಿಗಳನ್ನು ಜಾಗೆಯ ಮೇಲೆ ಮುಟ್ಟಿಸುವ ಕರಾರಿನೊಂದಿಗೆ, ದೋಣಿ ಒಂದಕ್ಕೆ ರೂ. 340300.00 ದರದಂತೆ ಒಟ್ಟು ರೂ. 51,04,500.00 ಗಳ ವೆಚ್ಚದಲ್ಲಿ 15 ದೋಣಿಗಳನ್ನು ಸಿಆರ್‌ಎಫ್ ಅನುದಾನದಿಂದ ಖರೀದಿಸಲು ಮಂಜೂರಾತಿ ನೀಡಲಾಗಿದೆ.

ದೋಣಿಗಳನ್ನು ಖರೀದಿಸುವಾಗ ಎಲ್ಲ ರೀತಿಯ ಆರ್ಥಿಕ ನಿಯಮಗಳನ್ನು ಹಾಗೂ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆ ಹಾಗೂ ಖರೀದಿ ನಿಯಮಗಳನ್ನು ಪಾಲಿಸುವುದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 321

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ವಿಷಯ:** 2007–08ನೇ ಸಾಲಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ಪ್ರವಾಹ/ಅತಿವೃಷ್ಟಿಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2007–08ನೇ ಸಾಲಿನಲ್ಲಿ ಸೆಪ್ಟೆಂಬರ್ ಮಾಹೆಯಲ್ಲಿ ಬಿದ್ದ ಸತತ/ಭಾರಿ ಮಳೆಯಿಂದ/ಪ್ರವಾಹದಿಂದ ಗದಗ್, ಧಾರವಾಡ ಜಿಲ್ಲೆಗಳಲ್ಲಿ ಜಾನುವಾರು ಹಾನಿ, ಮಾನವ ಜೀವಹಾನಿ, ಮನೆಹಾನಿ, ಬೆಳೆ ಹಾನಿಯಾಗಿದ್ದು ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲೆಯ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಕೋಲಾರ, ಬಳ್ಳಾರಿ, ದಾವಣಗೆರೆ, ಶಿವಮೊಗ್ಗ, ಬಾಗಲಕೋಟೆ, ಹಾಸನ, ಬಿಜಾಪುರ, ಚಿಕ್ಕಬಳ್ಳಾಪುರ, ರಾಮನಗರ ಜಿಲ್ಲೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಬಗೆಹರಿಸಲು ಅನುದಾನ ಬಿಡುಗಡೆ ಮಾಡುವಂತೆ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 100 ಟಿಎನ್‌ಆರ್ 2008, ಬೆಂಗಳೂರು ದಿನಾಂಕ 13ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ್, ಧಾರವಾಡ ಜಿಲ್ಲೆಗಳಲ್ಲಿ ಬಿದ್ದ ಸತತ ಭಾರಿ ಮಳೆಯಿಂದ ಹಾಗೂ ಪ್ರವಾಹದಿಂದ ಆಗಿರುವ ಜೀವಹಾನಿ, ಜಾನುವಾರುಹಾನಿ, ಮನೆಹಾನಿ, ಬೆಳೆಹಾನಿಗೆ ತುರ್ತು ಪರಿಹಾರ ಕೈಗೊಳ್ಳಲು ಮತ್ತು ಕೋಲಾರ, ಬಳ್ಳಾರಿ, ದಾವಣಗೆರೆ, ಶಿವಮೊಗ್ಗ, ಬಾಗಲಕೋಟೆ, ಹಾಸನ, ಬಿಜಾಪುರ, ಚಿಕ್ಕಬಳ್ಳಾಪುರ, ರಾಮನಗರ ಜಿಲ್ಲೆಗಳಲ್ಲಿ ತುರ್ತು ಕುಡಿಯುವ ನೀರು ಸರಬರಾಜು ಮಾಡಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| **ಕ್ರಮ ಸಂಖ್ಯೆ** | **ಜಿಲ್ಲೆ** | **ಬಿಡುಗಡೆ ಮಾಡಿರುವ ಮೊತ್ತ (ರೂ. ಲಕ್ಷಗಳಲ್ಲಿ)** | **ಉದ್ದೇಶ** |
|---|---|---|---|
| 1 | ಗದಗ | 180.00 | ಪ್ರವಾಹಪೀಡಿತ ಸಂತ್ರಸ್ಥರಿಗೆ ಪರಿಹಾರಕ್ಕೆ |
| 2 | ಧಾರವಾಡ | 104.00 | ಪ್ರವಾಹದಿಂದ ಆಗಿರುವ ಬೆಳೆ ಪರಿಹಾರಕ್ಕೆ |
| 3 | ಕೋಲಾರ | 50.00 | ಕುಡಿಯುವ ನೀರು ಸರಬರಾಜು |
| 4 | ಬಳ್ಳಾರಿ | 50.00 | ಕುಡಿಯುವ ನೀರು ಸರಬರಾಜು |
| 5 | ದಾವಣಗೆರೆ | 25.00 | ಕುಡಿಯುವ ನೀರು ಸರಬರಾಜು |
| 6 | ಶಿವಮೊಗ್ಗ | 25.00 | ಕುಡಿಯುವ ನೀರು ಸರಬರಾಜು |
| 7 | ಬಾಗಲಕೋಟೆ | 25.00 | ಕುಡಿಯುವ ನೀರು ಸರಬರಾಜು |
| 8 | ಹಾಸನ | 25.00 | ಕುಡಿಯುವ ನೀರು ಸರಬರಾಜು |
| 9 | ಬಿಜಾಪುರ | 25.00 | ಕುಡಿಯುವ ನೀರು ಸರಬರಾಜು |
| 10 | ಚಿಕ್ಕಬಳ್ಳಾಪುರ | 25.00 | ಕುಡಿಯುವ ನೀರು ಸರಬರಾಜು |
| 11. | ರಾಮನಗರ | 25.00 | ಕುಡಿಯುವ ನೀರು ಸರಬರಾಜು |
| | **ಒಟ್ಟು** | **559.00** | |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಧಾರವಾಡಕ್ಕೆ ಬಿಡುಗಡೆ ಮಾಡಿರುವ ರೂ. 104.00 ಲಕ್ಷ ಅನುದಾನವನ್ನು ಕೆಳಕಂಡಂತೆ ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸುವುದು.

2245–01–102–0–00–100 ಯೋಜನೇತರ ರೂ. 45.00 ಲಕ್ಷಗಳು

2245–02–110–0–01–100 ಯೋಜನೇತರ ರೂ. 59.00 ಲಕ್ಷಗಳು

ಗದಗ್, ಕೋಲಾರ, ಬಳ್ಳಾರಿ, ದಾವಣಗೆರೆ, ಶಿವಮೊಗ್ಗ, ಬಾಗಲಕೋಟೆ, ಬಿಜಾಪುರ, ಹಾಸನ, ಚಿಕ್ಕಬಳ್ಳಾಪುರ, ರಾಮನಗರ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿದ ಅನುದಾನವನ್ನು ಲೆಕ್ಕಶೀರ್ಷಿಕೆ 2245–01–102–0–00–100 ಯೋಜನೇತರ ಅಡಿಯಲ್ಲಿ ಭರಿಸುವುದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 169/ಇಎಕ್ಸ್‌ಪಿ–7/08 ದಿನಾಂಕ 20.2.2008 ಹಾಗೂ ಎಫ್‌ಡಿ 107 ಇಎಕ್ಸ್‌ಪಿ 7/2007 ದಿನಾಂಕ 27.7.2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 501

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ವಿಷಯ:** 2007–08ನೇ ಸಾಲಿನ ಮಾರ್ಚ್ ತಿಂಗಳಲ್ಲಿ ಗುಲ್ಬರ್ಗ ಜಿಲ್ಲೆಯಲ್ಲಿ ಸುರಿದ ಭಾರಿ ಮಳೆಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಯಿಂದ ಬಂದಿರುವ ಬೇಡಿಕೆ ಪತ್ರ

**ಪ್ರಸ್ತಾವನೆ:**

2007–08ನೇ ಸಾಲಿನ ಮಾರ್ಚ್ ತಿಂಗಳಲ್ಲಿ ಗುಲ್ಬರ್ಗ ಜಿಲ್ಲೆಯಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಜಾನುವಾರು ಹಾನಿ, ಮಾನವ ಜೀವಹಾನಿ, ಮಳೆಹಾನಿ, ಬೆಳೆಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಗುಲ್ಬರ್ಗ ಜಿಲ್ಲೆಗೆ ರೂ. 234.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 230 ಟಿಎನ್‌ಆರ್ 2006 (P2), ಬೆಂಗಳೂರು ದಿನಾಂಕ: 31ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗ ಜಿಲ್ಲೆಯಲ್ಲಿ ಮಾರ್ಚ್ ತಿಂಗಳಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 234.00/– ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕೆಳಕಂಡಂತೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು.

1. ಮಾನವ ಜೀವಹಾನಿ
2. ಜಾನುವಾರು ಜೀವಹಾನಿ
3. ಮನೆಹಾನಿ
4. ಬೆಳೆಹಾನಿ
5. ಕುಡಿಯುವ ನೀರು
6. ಕೆರೆಕಟ್ಟೆಗಳ ದುರಸ್ತಿ
7. ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿ

ತುರ್ತು ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿದ್ದಲ್ಲಿ ಸರ್ಕಾರದ ಪೂರ್ವಾನುಮೋದನೆ ಪಡೆದು ಕೈಗೊಳ್ಳುವುದು ಇಂತಹ ಕಾಮಗಾರಿಗಳು ಅತಿ ತುರ್ತಾಗಿ ಕೈಗೊಳ್ಳಬೇಕಾಗಿದ್ದಲ್ಲಿ ಅಂತಹ ಕಾಮಗಾರಿಗಳನ್ನು ಮಾತ್ರ ಕೈಗೊಂಡು ಒಂದು ತಿಂಗಳೊಳಗಾಗಿ ಪೂರ್ಣಗೊಳಿಸುವುದು. ವಿಳಂಬ ಮಾಡಿದಲ್ಲಿ ಪ್ರಕೃತಿ ವಿಕೋಪದಿಂದ ಅನುದಾನ ನೀಡಲು ಸಾಧ್ಯವಾಗುವುದಿಲ್ಲ. ಆಯಾ ಇಲಾಖೆಯ ಆಯವ್ಯಯದಲ್ಲಿ ಭರಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 280 ವೆಚ್ಚ 7/08 ದಿನಾಂಕ 27–03–2008 ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 616

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ವಿಷಯ:** 2007–08ನೇ ಸಾಲಿನ ಮಾರ್ಚ್ ತಿಂಗಳಲ್ಲಿ ಸುರಿದ ಭಾರಿ ಮಳೆಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು

**ಪ್ರಸ್ತಾವನೆ:**

2007–08ನೇ ಸಾಲಿನ ಮಾರ್ಚ್ ತಿಂಗಳಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಜಾನುವಾರು ಹಾನಿ, ಮಾನವ ಜೀವಹಾನಿ, ಮನೆ ಹಾನಿ ಬೆಳೆಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 230 ಟಿಎನ್‌ಆರ್ 2006 (P2), ಬೆಂಗಳೂರು ದಿನಾಂಕ: 28ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಜಿಲ್ಲೆಗಳಲ್ಲಿ ಪ್ರಕೃತಿ ವಿಕೋಪದಿಂದ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಬಿಡುಗಡೆ ಮಾಡಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಹಾವೇರಿ | 100.00 |
| 2. | ದಾವಣಗೆರೆ | 100.00 |
| 3. | ಕೋಲಾರ | 50.00 |
| 4. | ಚಿತ್ರದುರ್ಗ | 50.00 |
| 5. | ಧಾರವಾಡ | 100.00 |
| 6. | ಗದಗ್ | 300.00 |
| 7. | ಶಿವಮೊಗ್ಗ | 100.00 |
| 8. | ಚಿಕ್ಕಮಗಳೂರು | 50.00 |
| 9. | ಬಳ್ಳಾರಿ | 50.00 |
| 10. | ಬೆಳಗಾಂ<br>ಮಳೆಹಾನಿ ಪರಿಹಾರ 200.00<br>ದೋಣಿ ಖರೀದಿಗಾಗಿ 51.00 | 251.00 |
| 11. | ಬಾಗಲಕೋಟೆ | 100.00 |
| 12. | ಹಾಸನ | 50.00 |
| 13. | ಬಿಜಾಪುರ | 100.00 |
| 14. | ಉತ್ತರ ಕನ್ನಡ | 25.00 |
| 15. | ಬೀದರ್ | 100.00 |
| 16. | ರಾಮನಗರ | 25.00 |
| 17. | ಕೊಪ್ಪಳ | 50.00 |
| 18. | ರಾಯಚೂರು | 100.00 |
| | **ಒಟ್ಟು** | **1701.00** |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕೆಳಕಂಡಂತೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು.

1. ಮಾನವ ಜೀವಹಾನಿ
2. ಜಾನುವಾರು ಜೀವಹಾನಿ
3. ಮನೆ ಹಾನಿ
4. ಬೆಳೆ ಹಾನಿ
5. ಕುಡಿಯುವ ನೀರು
6. ಕೆರೆಕಟ್ಟೆಗಳ ದುರಸ್ತಿ
7. ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿ

ತುರ್ತು ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿದ್ದಲ್ಲಿ ಸರ್ಕಾರದ ಪೂರ್ವಾನುಮೋದನೆ ಪಡೆದು ಕೈಗೊಳ್ಳುವುದು. ಇಂತಹ ಕಾಮಗಾರಿಗಳು ಅತಿ ತುರ್ತಾಗಿ ಕೈಗೊಳ್ಳಬೇಕಾಗಿದ್ದಲ್ಲಿ ಅಂತಹ ಕಾಮಗಾರಿಗಳನ್ನು ಮಾತ್ರ ಕೈಗೊಂಡು ಒಂದು ತಿಂಗಳೊಳಗಾಗಿ ಪೂರ್ಣಗೊಳಿಸುವುದು. ವಿಳಂಬ ಮಾಡಿದಲ್ಲಿ ಪ್ರಕೃತಿ ವಿಕೋಪದಿಂದ ಅನುದಾನ ನೀಡಲು ಸಾಧ್ಯವಾಗುವುದಿಲ್ಲ. ಆಯಾ ಇಲಾಖೆಯ ಆಯವ್ಯಯದಲ್ಲಿ ಭರಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2007-08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245-02-110-0-01-100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 280 ವೆಚ್ಚ-7/08 ದಿನಾಂಕ 27-03-2008 ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ವಿಷಯ:** 2007-08ನೇ ಸಾಲಿನ ಮಾರ್ಚ್ ತಿಂಗಳಲ್ಲಿ ಗದಗ್ ಜಿಲ್ಲೆಯಲ್ಲಿ ಸುರಿದ ಭಾರಿ ಮಳೆಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಜಿಲ್ಲಾಧಿಕಾರಿಯಿಂದ ಬಂದಿರುವ ಬೇಡಿಕೆ ಪತ್ರ.
2 ಸರ್ಕಾರದ ಆದೇಶ ಸಂಖ್ಯೆ: ಕಂಇ 230 ಟಿಎನ್‌ಆರ್ 2006 (P2) ದಿ: 28.3.2008

**ಪ್ರಸ್ತಾವನೆ:**

2007-08ನೇ ಸಾಲಿನ ಮಾರ್ಚ್ ತಿಂಗಳಲ್ಲಿ ಗದಗ್ ಜಿಲ್ಲೆಯಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಜಾನುವಾರು ಹಾನಿ, ಮಾನವ ಜೀವಹಾನಿ, ಮನೆಹಾನಿ, ಬೆಳೆಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಮೇಲೆ ಓದಲಾದ (2)ರ ಆದೇಶದಲ್ಲಿ ರೂ. 300.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಹೆಚ್ಚುವರಿಯಾಗಿ ರೂ. 200.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 230 ಟಿಎನ್‌ಆರ್ 2006 (p2)-1, ಬೆಂಗಳೂರು ದಿನಾಂಕ: 28ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಗದಗ್ ಜಿಲ್ಲೆಯಲ್ಲಿ ಮಾರ್ಚ್ ತಿಂಗಳಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 200.00/- ಲಕ್ಷಗಳನ್ನು ಗದಗ್ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕೆಳಕಂಡಂತೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು.

1) ಮಾನವ ಜೀವಹಾನಿ
2) ಜಾನುವಾರು ಜೀವಹಾನಿ

3) ಮನೆಹಾನಿ

4) ಬೆಳೆಹಾನಿ

5) ಕುಡಿಯುವ ನೀರು

6) ಕೆರೆಕಟ್ಟೆಗಳ ದುರಸ್ತಿ

7) ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿ

ತುರ್ತು ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿದ್ದಲ್ಲಿ ಸರ್ಕಾರದ ಪೂರ್ವಾನುಮೋದನೆ ಪಡೆದು ಕೈಗೊಳ್ಳುವುದು. ಇಂತಹ ಕಾಮಗಾರಿಗಳು ಅತಿ ತುರ್ತಾಗಿ ಕೈಗೊಳ್ಳಬೇಕಾಗಿದ್ದಲ್ಲಿ ಅಂತಹ ಕಾಮಗಾರಿಗಳನ್ನು ಮಾತ್ರ ಕೈಗೊಂಡು ಒಂದು ತಿಂಗಳೊಳಗಾಗಿ ಪೂರ್ಣಗೊಳಿಸುವುದು. ವಿಳಂಬ ಮಾಡಿದಲ್ಲಿ ಪ್ರಕೃತಿ ವಿಕೋಪದಿಂದ ಅನುದಾನ ನೀಡಲು ಸಾಧ್ಯವಾಗುವುದಿಲ್ಲ. ಆಯಾ ಇಲಾಖೆಯ ಆಯವ್ಯಯದಲ್ಲಿ ಭರಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 280 ವೆಚ್ಚ–7/08 ದಿನಾಂಕ 27–03–2008 ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 602

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದಲ್ಲಿ ಸಮರ್ಪಕವಾದ ಆಡಳಿತವನ್ನು ನೀಡುವ ನಿಟ್ಟಿನಲ್ಲಿ ಸರ್ಕಾರಕ್ಕೆ ಸೂಕ್ತವಾದ ಸಲಹೆಗಳನ್ನು ನೀಡುವ ಸಲುವಾಗಿ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಆರ್ಥಿಕ ಸಲಹೆಗಾರರ 1 ಹುದ್ದೆಯನ್ನು ಸೃಜಿಸುವ ಅಗತ್ಯತೆಯನ್ನು ಮನಗಂಡ ಸರ್ಕಾರವು ಅದರಂತೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 492 ಸಅಸೇ 2008 ಬೆಂಗಳೂರು, ದಿನಾಂಕ 10ನೇ ಜೂನ್ 2008**

ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರ ಒಂದು ಹುದ್ದೆಯನ್ನು ವೇತನ ರಹಿತ ದರ್ಜೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಖ್ಯಮಂತ್ರಿ ಅವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಮೂಲಕ ಸೃಜಿಸಲಾಗಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 824: ಸೇವೆಗಳು–4:2008, ದಿನಾಂಕ 9–6–2008ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 928

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು.ಇ. (ಸೇವೆಗಳು–3)